# ಪ್ರಭುತ್ವ

ವಿ. ಐ. ಲೆನಿನ್



ಜನಶಕ್ತಿ ಪ್ರಕಾಶನ

ಲ್ತಾನಪೇಟೆ, ಫೋನ್ ೩೮೧೦ ಬೆಂಗಳೂರು-೨.

ಲಕ್ಷ್ಮಣ ತೆಲಗಾವಿ
9.10.74

# ಪ್ರಭುತ್ವ

(ಜುಲೈ 11, 1919ರಂದು ಸ್ವೆರ್‌ಡ್ಲೋವ್ ವಿಶ್ವವಿದ್ಯಾನಿಲಯದಲ್ಲಿ ಮಾಡಿದ ಭಾಷಣ.)

ಮೂಲ

ವಿ. ಐ. ಲೆನಿನ್

ಅನುವಾದ

ಶ್ರೀನಾಥ್

**ಬೆಲೆ 0·20 N.P.**




ಪ್ರಕಾಶಕರು
ಜನಶಕ್ತಿ ಪ್ರಕಾಶನ
ಬೆಂಗಳೂರು-೨

# V. I. LENIN
# THE STATE

(A Lecture Delivered at the Sverdlov University, July 11, 1919)

*Kannada Translation*

*Rendered by*

**SRINATH**




*We thank V/o "Mezhdunarodnaya Kniga", Moscow, 200, USSR for extending their kind co-operation in bringing out this book.*

*—PUBLISHERS*

Printed at JANASHAKTHI PRINTERS, L-59, K. V. Temple St Sultanpet, Bangalore 2, and Published by C. R. Krishna Rao for JANASHAKTHI PRAKASHANA, Sultanpet, Bangalore 2

*May, 1957* 

ಗೆಳೆಯರೇ, ನೀವು ಸಿದ್ಧಗೊಳಿಸಿ ನನಗೆ ತಿಳಿಸಿರುವ ಕಾರ್ಯಕ್ರಮದ ಪ್ರಕಾರ, ಇಂದಿನ ಭಾಷಣದ ವಿಷಯವು ಪ್ರಭುತ್ವ ಎನ್ನುವುದಾಗಿದೆ. ಈ ವಿಷಯದ ಬಗ್ಗೆ ಈಗಾಗಲೇ ನೀವು ಎಷ್ಟರಮಟ್ಟಿಗೆ ಪರಿಚಯ ಹೊಂದಿದ್ದೀರಿ ಎನ್ನುವುದು ನನಗೆ ತಿಳಿಯದು. ನನ್ನ ತಿಳುವಳಿಕೆ ತಪ್ಪಾಗಿರದಿದ್ದ ಪಕ್ಷದಲ್ಲಿ, ನಿಮ್ಮ ವ್ಯಾಸಂಗಗಳು ಈಗತಾನೇ ಪ್ರಾರಂಭವಾಗಿವೆ ಮತ್ತು ಈ ವಿಷಯವನ್ನು ಕ್ರಮವಾದ ರೀತಿಯಲ್ಲಿ ನೀವು ತಿಳಿಯ ಹೊರಟಿರುವುದು ಇದೇ ಮೊದಲನೆಯ ಸಲ. ನನ್ನ ಭಾವನೆ ಸರಿಯಾಗಿದ್ದ ಪಕ್ಷದಲ್ಲಿ, ಈ ಕಷ್ಟವಾದ ವಿಷಯದ ಬಗ್ಗೆ ನಾನು ಕೊಡಲಿರುವ ಪ್ರಥಮ ಉಪನ್ಯಾಸದಲ್ಲಿ ನನ್ನ ವಿವರಣೆಯನ್ನು ಕೇಳುವವರಲ್ಲಿ ಅನೇಕರಿಗೆ ಸಾಕಷ್ಟು ಸ್ಪಷ್ಟವೂ ಮತ್ತು ಅರ್ಥವಾಗುವಂತೆಯೂ ಮಾಡುವುದರಲ್ಲಿ ನಾನು ಯಶಸ್ವಿಯಾಗದಿದ್ದರೂ ಇರಬಹುದು. ಹೀಗಾದ ಪಕ್ಷದಲ್ಲಿ, ನೀವು ಅದರಿಂದ ಕಳವಳಗೊಳ್ಳಬಾರದು ; ಏಕೆಂದರೆ ಪ್ರಭುತ್ವದ ಪ್ರಶ್ನೆಯು ಅತ್ಯಂತ ತೊಡಕಾದ ಮತ್ತು ಕಷ್ಟವಾದ ಪ್ರಶ್ನೆ. ಪ್ರಾಯಶಃ ಇತರ ಯಾವುದೇ ವಿಷಯಕ್ಕಿಂತ ಈ ವಿಷಯದಲ್ಲಿ ಬೂರ್ಜ್ವಾ (ಬಂಡವಾಳಗಾರ) ಪಂಡಿತರೂ, ಲೇಖಕರೂ ಮತ್ತು ತತ್ವಜ್ಞಾನಿಗಳೂ ಹೆಚ್ಚು ಗೊಂದಲವನ್ನು ಉಂಟುಮಾಡಿದ್ದಾರೆ. ಆದುದರಿಂದ ಒಂದು ಸಂಕ್ಷೇಪ ಭಾಷಣದಿಂದ, ಅದೂ ಮೊದಲನೆಯ ಸಲವೇ, ಈ ವಿಷಯದ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಹೊಂದಬಹುದೆಂದು ನಿರೀಕ್ಷಿಸುವುದಕ್ಕಾಗುವುದಿಲ್ಲ. ಈ ವಿಷಯದ ಮೇಲೆ ಪ್ರಥಮ ಭಾಷಣವನ್ನು ಕೇಳಿದ ಮೇಲೆ, ನಿಮಗೆ ಅರ್ಥವಾಗದ ಅಥವಾ ಸ್ಪಷ್ಟವಾಗದ ಭಾಗಗಳನ್ನು ಗುರ್ತು ಹಾಕಿಕೊಂಡು, ಎರಡನೆಯ ಬಾರಿ, ಮೂರನೆಯ ಬಾರಿ ಮತ್ತು ನಾಲ್ಕನೆಯ ಬಾರಿ ಆ ಭಾಗಗಳಿಗೆ ಹಿಂತಿರುಗಬೇಕು. ಈ ರೀತಿಯಲ್ಲಿ ಪ್ರಥಮದಲ್ಲಿ ನಿಮಗೆ ಅರ್ಥವಾಗದೇ ಇರುವಂತಹ ವಿಚಾರಗಳನ್ನು, ಅನಂತರ ಓದುವುದರ ಮೂಲಕವೂ ಮತ್ತು ವಿವಿಧ ಉಪನ್ಯಾಸಗಳನ್ನೂ ಮತ್ತು ಭಾಷಣಗಳನ್ನೂ ಕೇಳುವುದರ ಮೂಲಕವೂ, ನೀವು ಹೆಚ್ಚಿಸಿಕೊಳ್ಳಬಹುದು ಮತ್ತು ಸ್ಪಷ್ಟಗೊಳಿಸಿಕೊಳ್ಳಬಹುದು. ಮತ್ತೊಮ್ಮೆ ನಾವೆಲ್ಲರೂ ಸಭೆ ಸೇರಲು ಸಾಧ್ಯವಾಗಬಹುದೆಂದು ನಂಬುತ್ತೇನೆ. ಇಂದಿನ ಭಾಷಣದಿಂದ ಉಂಟಾಗುವ ಎಲ್ಲಾ

ಉಪಪ್ರಶ್ನೆಗಳ ಮೇಲೂ ಆಗ ಅಭಿಪ್ರಾಯ ವಿನಿಮಯ ಮಾಡಿಕೊಳ್ಳಬಹುದು ಮತ್ತು ಅತಿ ಅಸ್ಪಷ್ಟವಾಗಿ ಉಳಿದಿರುವುದನ್ನು ಪರಿಶೀಲಿಸಬಹುದು. ಭಾಷಣಗಳನ್ನು ಉಪನ್ಯಾಸಗಳನ್ನೂ ಕೇಳುವುದರ ಜೊತೆಗೆ ಮಾರ್ಕ್ಸ್ ಮತ್ತು ಎಂಗೆಲ್ಸರ ಅತ್ಯಂ ಮುಖ್ಯವಾದ ಕೃತಿಗಳಲ್ಲಿ ಕೆಲವನ್ನಾದರೂ ಓದಿಕೊಳ್ಳಲು ನೀವು ಕೊಂಚಕಾ ವನ್ನು ವಿನಿಯೋಗಿಸುವಿರೆಂದು ಕೂಡ ನಾನು ನಂಬುತ್ತೇನೆ. ಸೋವಿಯತ ಮತ್ತು ಪಾರ್ಟಿ ಶಾಲೆಯ ವಿದ್ಯಾರ್ಥಿಗಳಿಗಾಗಿ ಇರುವ ನಿಮ್ಮ ಪುಸ್ತಕ ಭಂಡಾ ದಲ್ಲಿನ ಸಾಹಿತ್ಯ ಸಂಗ್ರಹಗಳಲ್ಲೂ ಕೈ ಹೊತ್ತಿಗೆಗಳಲ್ಲೂ ಈ ಅತ್ಯಂತ ಮುಖ್ಯವಾ ಕೃತಿಗಳು ದೊರೆಯುವುದರಲ್ಲಿ ನನಗೆ ಸಂದೇಹವಿಲ್ಲ; ಅವುಗಳಲ್ಲಿನ ವಿವರಣೆಯ ಕಠಿಣವಾಗಿರಬಹುದಾದ ಕಾರಣದಿಂದ ನಿಮ್ಮಲ್ಲಿ ಕೆಲವರಿಗೆ ಮೊದಲಿನಲ್ಲಿ ಮಾತ್ರ ನಿರಾಶೆಯುಂಟಾದರೂ, ಇದರಿಂದ ನೀವು ಕಳವಳ ಪಡಬಾರದೆಂದು ನಾನ ಮತ್ತೊಮ್ಮೆ ನಿಮ್ಮನ್ನು ಎಚ್ಚರಿಸುತ್ತೇನೆ. ಮೊದಲನೆಯ ಸಲ ಓದಿದಾಗ ಸ್ಪಷ ವಾಗದೇ ಇದ್ದದ್ದು ಎರಡನೆಯ ಸಲ ಓದಿದಾಗಲೋ ಅಥವಾ ಅನಂತರ ಅದೇ ಪ್ರಶ್ ಯನ್ನು ಸ್ವಲ್ಪ ಬೇರೆ ದೃಷ್ಟಿಕೋಣದಿಂದ ನೋಡಿದಾಗಲೋ, ಅದು ಸುಸ್ಪಷ್ಟವಾಗ ವುದು. ಏಕೆಂದರೆ ಈ ಪ್ರಶ್ನೆಯು ಅಷ್ಟು ತೊಡಕಾದುದೆಂದೂ ಮತ್ತು ಬೂರ್ಜ್ವ ಪಂಡಿತರೂ ಲೇಖಕರೂ ಅದರ ಬಗ್ಗೆ ಅಷ್ಟು ಗೊಂದಲವನ್ನು ಉಂಟುಮಾಡಿದಾ ರೆಂದೂ, ಆದುದರಿಂದ ಈ ಪ್ರಶ್ನೆಯನ್ನು ಲಕ್ಷ್ಯವಿಟ್ಟು ಅಭ್ಯಾಸಮಾಡಿ ಸ್ವತಂತ್ರವಾ ಅದನ್ನು ಗ್ರಹಿಸಿಕೊಳ್ಳಲಿಚ್ಛಿಸುವವರು ಅದರೊಂದಿಗೆ ಅನೇಕ ಸಲ ಹೆಣಗಾ ಬೇಕಾಗುವುದೆಂದೂ, ಮತ್ತೆ ಮತ್ತೆ ಈ ಪ್ರಶ್ನೆಗೆ ಹಿಂತಿರುಗಿ, ಅದರ ಬಗ್ಗೆ ಸ್ಪಷ್ ವಾದ ಮತ್ತು ದೃಢವಾದ ತಿಳುವಳಿಯನ್ನು ಪಡೆಯುವುದಕ್ಕಾಗಿ, ಬೇರೆ ಬೇ ದೃಷ್ಟಿಕೋಣಗಳಿಂದ ಅದನ್ನು ನೋಡಬೇಕಾಗುವುದೆಂದೂ ನಾನು ಮತ್ತೊಮ್ಮೆ ಹೇಳುತ್ತೇನೆ. ಸದ್ಯದಂತಹ ಪ್ರಚಂಡವಾದ ಮತ್ತು ಕ್ರಾಂತಿಕಾರಿ ಕಾಲಗಳ ಮಾತ್ರವಲ್ಲದೆ, ಅತ್ಯಂತ ಶಾಂತಿಯುತ ಕಾಲಗಳಲ್ಲಿ ಕೂಡ, ಒಂದಲ್ಲ ಒಂದ ಆರ್ಥಿಕ ಅಥವಾ ರಾಜಕೀಯ ಪ್ರಶ್ನೆಯ ಸಂಬಂಧದಲ್ಲಿ ಪ್ರತಿದಿನವೂ ಈ ಪ್ರಶ್ ಯನ್ನು ಯಾವುದಾದರೊಂದು ವೃತ್ತ ಪತ್ರಿಕೆಯಲ್ಲಿ ನೀವು ಕಾಣುವಿರಿ; ಏಕೆಂದ ಈ ಪ್ರಶ್ನೆಯು ಎಲ್ಲಾ ರಾಜಕೀಯದ ಅಂತಹ ಮೂಲಭೂತವಾದ ಪ್ರಧಾನ ಪ್ರಶ್ ಯಾಗಿದೆ. ಈ ಕಾರಣಗಳಿಂದಾಗಿ ಈ ಪ್ರಶ್ನೆಯ ಪರಿಶೀಲನೆಗೆ ಹಿಂತಿರುಗುವುದ ಎಷ್ಟೋ ಸುಲಭವಾಗುತ್ತದೆ. ಪ್ರತಿಯೊಂದು ದಿನವೂ, ಒಂದಲ್ಲ ಒಂದು ಸಂಬಂ

ದಲ್ಲಿ, ಈ ಕೆಳಗಂಡ ಪ್ರಶ್ನೆಗೆ ನೀವು ಹಿಂತಿರುಗುತ್ತಿರಬೇಕಾಗುತ್ತದೆ: ಪ್ರಭುತ್ವ ಎಂದರೆ ಏನು, ಅದರ ಸ್ವಭಾವ ಎಂತಹದು, ಅದರ ಮಹತ್ವವೇನು ಮತ್ತು ಬಂಡವಾಳಗಾರ ಪದ್ಧತಿಯನ್ನು ಉರುಳಿಸುವುದಕ್ಕಾಗಿ ಹೋರಾಡುತ್ತಿರುವ ನಮ್ಮ ಪಾರ್ಟಿಯಾದ ಕಮ್ಯೂನಿಸ್ಟ್ ಪಾರ್ಟಿಯು ಪ್ರಭುತ್ವದ ಬಗ್ಗೆ ಯಾವ ಧೋರಣೆಯನ್ನು ಹೊಂದಿದೆ? ಎಂಬ ಪ್ರಶ್ನೆಯನ್ನು ನೀವು ಎದುರಿಸಬೇಕಾಗುತ್ತದೆ. ನಿಮ್ಮ ಅಧ್ಯಯನದ ಪರಿಣಾಮವಾಗಿ, ಪ್ರಭುತ್ವದ ಮೇಲೆ ನೀವು ಕೇಳಲಿರುವ ಭಾಷಣಗಳ ಮತ್ತು ಉಪನ್ಯಾಸಗಳ ಪರಿಣಾಮವಾಗಿ, ಈ ಪ್ರಶ್ನೆಯನ್ನು ಸ್ವತಂತ್ರವಾಗಿ ಎದುರಿಸುವ ಸಾಮರ್ಥ್ಯವನ್ನು ನೀವು ಪಡೆದುಕೊಳ್ಳುವುದೇ ಪ್ರಧಾನ ವಿಷಯ. ಏಕೆಂದರೆ ಅತ್ಯಂತ ವಿವಿಧ ಸಂದರ್ಭಗಳಲ್ಲಿ, ಅತ್ಯಂತ ಚಿಲ್ಲರೆ ಪ್ರಶ್ನೆಗಳ ಸಂಬಂಧದಲ್ಲಿ, ಅತ್ಯಂತ ಅನಿರೀಕ್ಷಿತ ಪರಿಸ್ಥಿತಿಗಳಲ್ಲಿ ಮತ್ತು ವಿರೋಧಿಗಳೊಂದಿಗೆ ನಡೆಸುವ ಚರ್ಚೆಗಳಲ್ಲಿ ಮತ್ತು ವಾಗ್ವಾದಗಳಲ್ಲಿ ಈ ಪ್ರಶ್ನೆಯನ್ನು ನೀವು ಸಂಧಿಸುವಿರಿ. ಈ ಪ್ರಶ್ನೆಯ ಬಗ್ಗೆ ಸ್ವತಂತ್ರವಾಗಿ ದಾರಿ ಕಂಡುಕೊಳ್ಳಲು ನೀವು ಕಲಿತುಕೊಂಡಾಗ ಮಾತ್ರ ನಿಮ್ಮ ನಂಬಿಕೆಗಳು ಸಾಕಾದಷ್ಟು ದೃಢ ಹೊಂದಿದೆಯೆಂದೂ ಮತ್ತು ಯಾವುದೇ ಸಮಯದಲ್ಲಿ ಯಾರೊಬ್ಬರ ವಿರೋಧವಾಗಿ ಈ ನಂಬಿಕೆಗಳನ್ನು ಸಾಕಾದಷ್ಟು ಯಶಸ್ವಿಯಾಗಿ ರಕ್ಷಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದೀರೆಂದೂ ನೀವು ಪರಿಗಣಿಸಿಕೊಳ್ಳಬಹುದು.

ಈ ಕೆಲವು ಮಾತುಗಳನ್ನು ಆಡಿದನಂತರ, ಪ್ರಭುತ್ವವೆಂದರೇನು; ಅದು ಹೇಗೆ ಉದ್ಭವಿಸಿತು, ಮತ್ತು ಬಂಡವಾಳ ಪದ್ಧತಿಯನ್ನು ಸಂಪೂರ್ಣವಾಗಿ ಉರುಳಿಸಲು ಹೋರಾಡುತ್ತಿರುವ ಕಾರ್ಮಿಕ ವರ್ಗದ ಪಾರ್ಟಿಯಾದ, ಕಮ್ಯುನಿಸ್ಟ್ ಪಾರ್ಟಿಯು ಪ್ರಭುತ್ವದ ಬಗ್ಗೆ ಮೂಲಭೂತವಾಗಿ ಯಾವ ಧೋರಣೆಯನ್ನು ಇಟ್ಟುಕೊಳ್ಳಬೇಕು? ಎಂಬ ಪ್ರಶ್ನೆಯನ್ನೇ ಚರ್ಚಿಸುವುದಕ್ಕೆ ಪ್ರಾರಂಭಿಸುತ್ತೇವೆ.

ಬೂರ್ಜುವ ವಿಜ್ಞಾನ, ತತ್ವಜ್ಞಾನ, ನ್ಯಾಯಶಾಸ್ತ್ರ, ಅರ್ಥಶಾಸ್ತ್ರ ಮತ್ತು ಪತ್ರಿಕೋದ್ಯೋಮಗಳ ಪ್ರತಿನಿಧಿಗಳು ಉದ್ದೇಶಪೂರ್ವಕವಾಗಿಯೂ ಮತ್ತು ಗೊತ್ತಿಲ್ಲದೆಯೂ ಈ ಪ್ರಭುತ್ವದ ಪ್ರಶ್ನೆಯ ಮೇಲೆ ಉಂಟುಮಾಡಿರುವಷ್ಟು ಗೊಂದಲವನ್ನು ಹೊಂದಿರುವ ಬೇರೊಂದು ಪ್ರಶ್ನೆಯನ್ನು ಕಾಣುವುದು ಅಪರೂಪವೆಂದು ನಾನು ಆಗಲೇ ಹೇಳಿದ್ದೇನೆ. ಈ ಪ್ರಶ್ನೆಯನ್ನು ಧಾರ್ಮಿಕ ಪ್ರಶ್ನೆಗಳ ಗುಂಪಿಗೆ ಸೇರಿಸಿ

ಗೊಂದಲ ಉಂಟುಮಾಡುವ ಪ್ರಯತ್ನಗಳು ಪದೇ ಪದೇ ಮಾಡಲ್ಪಟ್ಟಿವೆ, ಇಂದಿಗ
ಈ ಪ್ರಯತ್ನಗಳು ನಿಂತಿಲ್ಲ. ಧಾರ್ಮಿಕ ತತ್ವಗಳ ಪ್ರತಿನಿಧಿಗಳು ಮಾತ್ರವಲ್ಲ (ಅವ
ಆರೀತಿ ಮಾಡುವರೆಂದು ನಿರೀಕ್ಷಿಸುವುದು ಸಹಜವಾಗಿಯೇ ಇದೆ) ಧಾರ್ಮಿಕ ಪೂರ್ವ
ಕಲ್ಪನೆಗಳಿಂದ ಸ್ವತಂತ್ರರಾಗಿದ್ದೇವೆಂದು ತಿಳಿದುಕೊಂಡಿರುವವರೂ ಕೂಡ, ಪ್ರಭು
ತ್ವದ ವಿಶಿಷ್ಟ ಪ್ರಶ್ನೆಯನ್ನು ಅನೇಕವೇಳೆ ಧರ್ಮದ ಪ್ರಶ್ನೆಗಳೊಂದಿಗೆ ಸೇರಿಸಿ, ಗೊಂ
ದಲ ಉಂಟುಮಾಡುತ್ತಾರೆ. ಪ್ರಭುತ್ವವು ದೈವಿಕವಾದುದೆಂದೂ, ಅಲೌಕಿಕವಾದ
ದೆಂದೂ, ಮಾನವಕೋಟಿಯು ಬದುಕಿ ಬಾಳಿಕೊಂಡು ಬಂದಿರುವುದಕ್ಕೆ ಕಾರ
ಭೂತವಾದ ಶಕ್ತಿ ಎಂದೂ, ಮನುಷ್ಯನಲ್ಲಿಲ್ಲದ ಮತ್ತು ಹೊರಗಿನಿಂದ ಅವನು ಪ
ಯಬೇಕಾಗಿರುವ ಗುಣವಿಶೇಷವನ್ನು ಕರೆತಂದು, ಜನಗಳಿಗೆ ಕೊಡುವಂತಹ, ಅ
ವಾ ಕೊಡಬಲ್ಲ ಒಂದು ಶಕ್ತಿಯೆಂದೂ; ದೈವ ಜನಿತವಾದ ಶಕ್ತಿಯೆಂದೂ ಹೀ
ಪ್ರಭುತ್ವವನ್ನು ವರ್ಣಿಸುವ ಸಿದ್ಧಾಂತವನ್ನು—ಅನೇಕವೇಳೆ ತೊಡಕಾಗಿರು
ಸಿದ್ಧಾಂತವನ್ನು—ವಿಚಾರಧಾರೆಯಿಂದ ಕೂಡಿರುವ ತಾತ್ವಿಕ ರೀತಿಯಲ್ಲಿ ಮತ್ತು
ವಾದಸರಣಿಯ ಮೂಲಕ ನಿರ್ಮಿಸಲು ಯತ್ನಿಸುತ್ತಾರೆ. ಶೋಷಿಸುವ ವರ್ಗಗಳ—
ಭೂಮಾಲೀಕರ ಮತ್ತು ಬಂಡವಾಳಗಾರರ—ಹಿತಗಳೊಂದಿಗೆ ಈ ಸಿದ್ಧಾಂತವು
ಎಂತಹ ನಿಕಟ ಸಂಬಂಧವನ್ನು ಹೊಂದಿದೆಯೆಂದರೆ, ಅವರ ಹಿತಗಳ ಸೇವೆಯನ್ನು
ಅದು ಎಷ್ಟರ ಮಟ್ಟಿಗೆ ಮಾಡುತ್ತದೆಯೆಂದರೆ, ಬೂರ್ಜವಾ ವರ್ಗದ ಪ್ರತಿನಿಧಿಗಳಾಗಿ
ರುವ ಮಹನೀಯರ ಎಲ್ಲಾ ಆಚಾರವ್ಯವಹಾರಗಳನ್ನೂ, ಅಭಿಪ್ರಾಯಗಳನ್ನೂ
ಮತ್ತು ವಿಜ್ಞಾನವನ್ನೂ ಅದು ಎಷ್ಟು ಆಳವಾಗಿ ಒಳಹೊಕ್ಕಿದೆಯೆಂದರೆ, ಎಲ್ಲೆಲ್ಲೂ
ಈ ಸಿದ್ಧಾಂತದ ಅವಶೇಷಗಳನ್ನು ನೀವು ಕಾಣಬಹುದು; ಅವರು ಧಾರ್ಮಿಕ ಪೂರ್ವ
ಕಲ್ಪನೆಗಳ ಪ್ರಭಾವದಲ್ಲಿದ್ದಾರೆಂಬ ಸೂಚನೆಯನ್ನು ಸುಳ್ಳೆಂದು ಜಿಗುಪ್ಸೆಯಿಂದ ತಿರ
ಸ್ಕರಿಸುವ ಮತ್ತು ಪ್ರಭುತ್ವದ ಪ್ರಶ್ನೆಯನ್ನು ನಾವು ತಿಳಿಯಾಗಿರುವ ಕಣ್ಣುಗಳಿಂದ
ಪರಿಗಣಿಸಬಲ್ಲೆವೆಂಬ ಧೃಡನಂಬಿಕೆಯಿಂದಿರುವ ಮೆನ್ಷೆವಿಕರೂ ಮತ್ತು ಸೋಷಿಯ
ಲಿಸ್ಟ್ ರೆವೊಲ್ಯೂಷನರಿಗಳೂ ಪ್ರಭುತ್ವದ ಬಗ್ಗೆ ಹೊಂದಿರುವ ಭಾವನೆಯಲ್ಲಿ ಕೂಡ
ಈ ಸಿದ್ಧಾಂತದ ಅವಶೇಷಗಳನ್ನು ನೀವು ಕಾಣಬಹುದು. ಅರ್ಥಶಾಸ್ತ್ರ ಮೂಲತತ್ವ
ಗಳೊಂದನ್ನು ಬಿಟ್ಟು ಬೇರೆ ಯಾವ ಪ್ರಶ್ನೆಗಿಂತಲೂ ಹೆಚ್ಚಾಗಿ ಪ್ರಭುತ್ವದ ಪ್ರಶ್ನೆಯು
ಆಳುವವರ್ಗಗಳ ಹಿತಗಳಮೇಲೆ ಪರಿಣಾಮ ಉಂಟುಮಾಡುವುದರಿಂದಲೇ, ಈವ
ಬಗ್ಗೆ ಅಷ್ಟು ಗೊಂದಲವನ್ನೆಬ್ಬಿಸಿ ತೊಡಕುಂಟುಮಾಡಿದ್ದಾರೆ. ಪ್ರಭುತ್ವದ ಸಿದ್ಧಾಂತವ

ಸಾಮಾಜಿಕ (ಸಮಾಜದಲ್ಲಿ ಕೆಲವರು ಹೊಂದಿರುವ) ವಿಶೇಷಾಧಿಕಾರವನ್ನು ಸಮರ್ಥಿಸಲು ನೆರವಾಗುತ್ತದೆ, ಶೋಷಣೆಯ ಇರುವಿಕೆಯನ್ನು, ಬಂಡವಾಳಗಾರಿಕೆಯ ಇರುವಿಕೆಯನ್ನು, ಸಮರ್ಥಿಸಲು ನೆರವಾಗುತ್ತದೆ. ಆದುದರಿಂದಲೇ ಈ ಪ್ರಶ್ನೆಯ ಮೇಲೆ ಪಕ್ಷಪಾತವಿರುವುದಿಲ್ಲವೆಂದು ನಾವೇನಾದರೂ ನಿರೀಕ್ಷಿಸುವಪಕ್ಷದಲ್ಲಿ, ವಿಜ್ಞಾನಿಗಳೆಂದು ಹೇಳಿಕೊಳ್ಳುವ ಜನರು ಈ ವಿಷಯದಮೇಲೆ ಶುದ್ಧವಾದ ವೈಜ್ಞಾನಿಕ ಅಭಿಪ್ರಾಯವನ್ನು ಕೊಡಬಲ್ಲರೆಂಬ ನಂಬಿಕೆಯೊಡನೆ ಈ ಪ್ರಶ್ನೆಯನ್ನು ಪರಿಶೀಲಿಸುವ ಪಕ್ಷದಲ್ಲಿ ಭಾರೀ ತಪ್ಪಾಗುವುದು. ಈ ಪ್ರಶ್ನೆಯೊಂದಿಗೆ ನೀವು ಪರಿಚಿತರಾದಮೇಲೆ ಮತ್ತು ಅದನ್ನು ಸಾಕಾವಷ್ಟು ಆಳವಾಗಿ ಪರಿಶೀಲಿಸಿದ ನಂತರ, ಪ್ರಭುತ್ವದ ಪ್ರಶ್ನೆಯಲ್ಲಿ, ಪ್ರಭುತ್ವದ ಸಿದ್ಧಾಂತದಲ್ಲಿ, ಬೇರೆ ಬೇರೆ ವರ್ಗಗಳ ಪರಸ್ಪರ ಹೋರಾಟವು ಯಾವಾಗಲೂ ನಿಮ್ಮ ಕಣ್ಣಿಗೆ ಬೀಳುವುದು. ಪ್ರಭುತ್ವದ ಬಗ್ಗೆ ಇರುವ ಅಭಿಪ್ರಾಯಗಳ ಘರ್ಷಣೆಯ ರೂಪದಲ್ಲಿ, ಪ್ರಭುತ್ವದ ಪಾತ್ರ ಮತ್ತು ಮಹತ್ವಗಳ ಬಗ್ಗೆ ಮಾಡುವ ಅಂದಾಜಿನಲ್ಲಿ, ಈ ಹೋರಾಟವು ಪ್ರತಿಬಿಂಬಿತವಾಗುವುದು ಅಥವಾ ವ್ಯಕ್ತಪಡುವುದು.

ಆದಷ್ಟು ವೈಜ್ಞಾನಿಕವಾಗಿ ಈ ಪ್ರಶ್ನೆಯನ್ನು ಪರಿಶೀಲಿಸುವುದಕ್ಕಾಗಿ, ಪ್ರಭುತ್ವದ ಹುಟ್ಟು ಮತ್ತು ಬೆಳವಣಿಗೆಯ ಚರಿತ್ರೆಯ ಮೇಲೆ ಕ್ಷಣಿಕ ದೃಷ್ಟಿಯನ್ನಾದರೂ ಬೀರುವುದು ಅಗತ್ಯ. ಸಾಮಾಜಿಕ ವಿಜ್ಞಾನದ ಯಾವುದೇ ಪ್ರಶ್ನೆಯಲ್ಲಿ ಅತ್ಯಂತ ನಂಬಲರ್ಹವಾದ ವಿಧಾನ ಯಾವುದೆಂದರೆ, ವಿವರಗಳ ಸಮೂಹದಲ್ಲಿಯಾಗಲೀ ಪರಸ್ಪರ ವಿರೋಧಾಭಿಪ್ರಾಯಗಳ ಅಪಾರ ವೈವಿಧ್ಯತೆಯಲ್ಲಿಯಾಗಲೀ ದಾರಿಕಾಣದಂತಾಗದಿರಲು ಮತ್ತು ಈ ಪ್ರಶ್ನೆಯನ್ನು ಸರಿಯಾದ ರೀತಿಯಲ್ಲಿ ಪರಿಶೀಲಿಸುವ ಅಭ್ಯಾಸವನ್ನು ನಿಜವಾಗಿಯೂ ಪಡೆದುಕೊಳ್ಳಲು ಅತ್ಯಂತ ಅವಶ್ಯಕವಾದ ವಿಧಾನ ಯಾವುದೆಂದರೆ, ಅದರಡಿಯಲ್ಲಿರುವ ಚಾರಿತ್ರಿಕ ಸಂಬಂಧವನ್ನು ಮರೆಯದಿರುವುದು, ಪರಿಶೀಲನೆಯಲ್ಲಿರುವ ಅಂಶವು ಚರಿತ್ರೆಯಲ್ಲಿ ಹೇಗೆ ಉದ್ಭವಿಸಿತು, ಅದರ ಬೆಳವಣಿಗೆಯಲ್ಲಿ ಈ ಅಂಶವು ಯಾವ ಪ್ರಧಾನ ಘಟ್ಟಗಳ ಮೂಲಕ ಹಾಯ್ದುಬಂದಿದೆ ಎನ್ನುವ ದೃಷ್ಟಿಯಿಂದ ಪ್ರತಿಯೊಂದು ಪ್ರಶ್ನೆಯನ್ನೂ ಪರೀಕ್ಷಿಸುವುದು ಮತ್ತು ಆ ವಸ್ತುವು ಇಂದು ಯಾವ ರೂಪವನ್ನು ತಾಳಿದೆ ಎಂಬುದನ್ನು ಅದರ ಬೆಳವಣಿಗೆಯ ದೃಷ್ಟಿಯಿಂದ ಪರೀಕ್ಷಿಸುವುದು.—ಇದೇ ನಂಬಿಕೆಗೆ ಪಾತ್ರವಾದ ವಿಧಾನ.

ಪ್ರಭುತ್ವದ ಪ್ರಶ್ನೆಯ ಸಂಬಂಧದಲ್ಲಿ ನೀವು ಎಂಗೆಲ್ಸರ ಕುಟುಂಬ, ಖಾಸಗೀ ಆಸ್ತಿ ಮತ್ತು ಪ್ರಭುತ್ವಗಳ ಮೂಲ ಎಂಬ ಪುಸ್ತಕದ ಪರಿಚಯಮಾಡಿಕೊಳ್ಳುವಿರೆಂದು ನಂಬಿದ್ದೇನೆ. ಇದು ಆಧುನಿಕ ಸಮಾಜವಾದದ ಮೂಲಭೂತ ಕೃತಿಗಳಲ್ಲಿ ಒಂದಾಗಿದೆ. ಅವರಲ್ಲಿರುವ ವಿಷಯಗಳನ್ನು ಸಿಕ್ಕಾಪಟ್ಟೆ ಬರೆದಿಲ್ಲವೆಂಬ ಮತ್ತು ಅಪಾರವಾದ ಐತಿಹಾಸಿಕ ಮತ್ತು ರಾಜಕೀಯ ವಸ್ತುವಿನ ಆಧಾರದ ಮೇಲೆಯೇ ಬರೆಯಲಾಗಿದೆ ಎಂಬ ಭರವಸೆಯಿಂದ, ಆ ಪುಸ್ತಕದ ಪ್ರತಿಯೊಂದು ವಾಕ್ಯವನ್ನೂ ನಂಬಿಕೆಯೊಡನೆ ಸ್ವೀಕರಿಸಬಹುದು. ಈ ಕೃತಿಯ ಎಲ್ಲಾ ಭಾಗಗಳನ್ನೂ ಜನಪ್ರಿಯವಾದ ರೀತಿಯಲ್ಲಿ ಮತ್ತು ಅರ್ಥವಾಗುವ ರೀತಿಯಲ್ಲಿ ಒಂದೇ ಸಮನಾಗಿ ವಿವರಿಸಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು; ಅವುಗಳಲ್ಲಿ ಕೆಲವು ಭಾಗಗಳನ್ನು ಅರ್ಥಮಾಡಿಕೊಳ್ಳಲು ಓದುವವನಿಗೆ ಚರಿತ್ರೆಯ ಮತ್ತು ಅರ್ಥಶಾಸ್ತ್ರದ ಒಂದಷ್ಟು ತಿಳುವಳಿಕೆಯು ಮುಂಚೆಯೇ ಇರಬೇಕಾಗುತ್ತದೆ. ಆದರೆ ಈ ಪುಸ್ತಕವನ್ನು ಓದುವಾಗ ಅದು ತಕ್ಷಣವೇ ಅರ್ಥವಾಗದಿದ್ದ ಪಕ್ಷದಲ್ಲಿ ನೀವು ಕಳವಳ ಪಡಬಾರದೆಂದು ಮತ್ತೊಮ್ಮೆ ಹೇಳುತ್ತೇನೆ, ಯಾರಿಗೂ ಹಾಗೆ ತಕ್ಷಣವೇ ಅರ್ಥವಾಗುವದಿಲ್ಲ. ಆದರೆ ನಿಮ್ಮಲ್ಲಿ ಆಸಕ್ತಿ ಉಂಟಾಗಿ ಅದನ್ನು ಮತ್ತೊಮ್ಮೆ ಓದಲು ಪ್ರಾರಂಭಿಸಿದಾಗ, ಪೂರ್ತಿಯಾಗಿ ಅರ್ಥವಾಗದಿದ್ದರೂ, ಅದರಲ್ಲಿನ ಹೆಚ್ಚಿನಭಾಗವನ್ನು ಅರ್ಥಮಾಡಿಕೊಳ್ಳುವುದರಲ್ಲಿ ನೀವು ಯಶಸ್ವಿಯಾಗುವಿರಿ. ನಾನು ತಿಳಿಸಿರುವ ಅರ್ಥದಲ್ಲಿ ಪ್ರಶ್ನೆಯ ಪರಿಶೀಲನೆಗೆ ಸರಿಯಾದ ವಿಧಾನವನ್ನು ಈ ಪುಸ್ತಕವು ತಿಳಿಸುವುದರಿಂದ ಈ ಪುಸ್ತಕದ ವಿಷಯವಾಗಿ ನಿಮಗೆ ಹೇಳಿದ್ದೇನೆ. ಪ್ರಭುತ್ವದ ಹುಟ್ಟಿನ ಚಾರಿತ್ರಿಕ ವರ್ಣನೆಯೊಡನೆ ಈ ಪುಸ್ತಕವು ಪ್ರಾರಂಭಿಸುತ್ತದೆ.

ಈ ಪ್ರಶ್ನೆಯನ್ನೂ ಹಾಗೆಯೇ ಬೇರೆ ಪ್ರತಿಯೊಂದು ಪ್ರಶ್ನೆಯನ್ನೂ–ಉದಾಹರಣೆಗೆ ಬಂಡವಾಳಗಾರ ಪದ್ಧತಿಯ ಹುಟ್ಟಿನ ಪ್ರಶ್ನೆ, ಮಾನವನು ಮಾನವನನ್ನು ಶೋಷಿಸುವುದು, ಸಮಾಜವಾದ, ಸಮಾಜವಾದವು ಹೇಗೆ ಉದ್ಭವಿಸಿತು, ಯಾವ ಸ್ಥಿತಿಗತಿಗಳು ಅದನ್ನು ಉಂಟುಮಾಡಿದವು—ಇಂತಹ ಪ್ರತಿಯೊಂದು ಪ್ರಶ್ನೆಯನ್ನೂ ಸರಿಯಾದ ರೀತಿಯಲ್ಲೂ ಮತ್ತು ನಂಬಿಕೆಯಿಂದಲೂ ಪರಿಶೀಲಿಸಬೇಕಾದರೆ, ಅದರ ಬೆಳವಣಿಗೆಯ ಇಡೀ ಚರಿತ್ರೆಯ ಮೇಲೆ ದೃಷ್ಟಿಯನ್ನು ಬೀರುವುದರಿಂದ ಮಾತ್ರ ಸಾಧ್ಯವಾಗುವುದು. ಈ ಪ್ರಶ್ನೆಯ ಸಂಬಂಧದಲ್ಲಿ ನಾವು ನೋಟ್ಟ ಮೊದಲು ಗಮ

ನಿಸಬೇಕಾದ ಅಂಶವೇನೆಂದರೆ, ಪ್ರಭುತ್ವ ಎನ್ನುವುದು ಎಲ್ಲಾ ಕಾಲದಲ್ಲೂ ಇರಲಿಲ್ಲವೆಂದು. ಪ್ರಭುತ್ವವಿಲ್ಲದ ಕಾಲವು ಹಿಂದೆ ಇತ್ತು. ಸಮಾಜವು ವರ್ಗಗಳಾಗಿ ಯಾವಾಗ ಮತ್ತು ಎಲ್ಲೆಲ್ಲಿ ವಿಭಾಗ ಹೊಂದುವುದೋ, ಶೋಷಕರು ಮತ್ತು ಶೋಷಿತರು ಯಾವಾಗ ಕಾಣಿಸಿಕೊಳ್ಳುತ್ತಾರೋ, ಆಗ ಮತ್ತು ಅಲ್ಲಿ ಪ್ರಭುತ್ವವೂ ಉದ್ಭವಿಸುತ್ತದೆ.

ಮಾನವನಿಂದ ಮಾನವನ ಶೋಷಣೆಯ ಪ್ರಥಮ ಸ್ವರೂಪವಾದ, ವರ್ಗ ವಿಭಾಗದ ಪ್ರಥಮ ಸ್ವರೂಪವಾದ ಗುಲಾಮ ಪದ್ಧತಿಗೆ ಮುಂಚೆ—ಗುಲಾಮರ ಮಾಲೀಕರು ಮತ್ತು ಗುಲಾಮರು ಹೀಗೆ ಸಮಾಜವು ವರ್ಗಗಳಾಗಿ ವಿಭಾಗವಾಗುವುದಕ್ಕೆ ಮುಂಚೆ—ಪಿತೃ ಪ್ರಧಾನವಾದ ಕುಟುಂಬವಿತ್ತು. ಇದನ್ನು ಕೆಲವು ವೇಳೆ ಕ್ಲಾನ್ (ಗೋತ್ರ) ಕುಟುಂಬ ಎಂದೂ ಕರೆಯುತ್ತಾರೆ. (ಕ್ಲಾನ್—ಪೀಳಿಗೆ, ಬಂಧುತ್ವ, ಪೀಳಿಗೆ ಮತ್ತು ಬಂಧುತ್ವಗಳಿಗನುಸಾರವಾಗಿ ಜನರು ಒಂದು ಕಡೆ ಒಟ್ಟಾಗಿ ಜೀವಿಸುತ್ತಿದ್ದ ಕಾಲ). ಆ ಆದಿಕಾಲದ ತಕ್ಕಷ್ಟು ನಿರ್ದಿಷ್ಟವಾದ ಗುರುತುಗಳು ಇಂದಿನ ಅನೇಕ ಆದಿವಾಸಿಗಳ ಜೀವನದಲ್ಲಿ ಉಳಿದುಕೊಂಡಿವೆ; ಆದಿಕಾಲದ ಸಂಸ್ಕೃತಿಯ ಮೇಲೆ ಬರೆಯಲಾಗಿರುವ ಯಾವುದೇ ಪುಸ್ತಕದ ಹಾಳೆಗಳನ್ನು ತಿರುವಿ ಹಾಕಿದರೂ, ಸಮಾಜವು ಗುಲಾಮರ ಒಡೆಯರು ಮತ್ತು ಗುಲಾಮರು ಎಂದು ಇನ್ನೂ ವಿಭಾಗವಾಗದಿದ್ದ ಕಾಲವು ಹಿಂದೆ ಇತ್ತೆಂಬ ಅಂಶವನ್ನು, ಆದಿಕಾಲದ ಕಮ್ಯೂನಿಸ್ಟ್ ಪದ್ಧತಿಯನ್ನು ಹೆಚ್ಚು ಕಮ್ಮಿ ಹೋಲುವಂತಹ ಸಮಾಜವು ಹಿಂದೆ ಇತ್ತೆಂಬ ಅಂಶವನ್ನು, ತೋರಿಸುವ ಹೆಚ್ಚು ಕಮ್ಮಿ ನಿರ್ದಿಷ್ಟವಾದ ವರ್ಣನೆಗಳನ್ನೂ, ಸೂಚನೆಗಳನ್ನೂ, ಮತ್ತು ನೆನಪುಗಳನ್ನೂ ಅಂತಹ ಪುಸ್ತಕಗಳಲ್ಲಿ ಓದಬಹುದು. ಅಂತಹ ಕಾಲದಲ್ಲಿ ಪ್ರಭುತ್ವವೆನ್ನುವುದು ಇರಲಿಲ್ಲ, ವ್ಯವಸ್ಥಾ ಪೂರ್ವಕವಾಗಿ ಬಲ ಪ್ರಯೋಗ ಮಾಡುವುದಕ್ಕಾಗಿ ಮತ್ತು ಬಲಾತ್ಕಾರವಾಗಿ ಜನರನ್ನು ಅಧೀನದಲ್ಲಿರಿಸಿಕೊಳ್ಳುವುದಕ್ಕಾಗಿ ಯಾವ ವಿಶೇಷ ಸಲಕರಣೆಯೂ ಇರಲಿಲ್ಲ. ಅಂತಹ ಸಲಕರಣೆಯನ್ನೇ ಪ್ರಭುತ್ವ ಎಂದು ಕರೆಯುವುದು.

ಆದಿಕಾಲದ ಸಮಾಜದಲ್ಲಿ, ಜನರು ಸಣ್ಣ ಸಣ್ಣ ಕುಟುಂಬ ಗುಂಪುಗಳಲ್ಲಿ ಜೀವಿಸುತ್ತಿದ್ದಾಗ ಮತ್ತು ಕಾಡು ಜನರ ಜೀವನಕ್ಕೆ ಸಮೀಪವಾದ ಸ್ಥಿತಿಯಲ್ಲಿ, ಬೆಳವಣಿಗೆಯ ಅತ್ಯಂತ ಕೆಳಗಿನ ಘಟ್ಟಗಳಲ್ಲಿಯೇ ಇನ್ನೂ ಇದ್ದಾಗ—ಈ ಯುಗಕ್ಕೂ

ಆಧುನಿಕ ನಾಗರಿಕ ಮಾನವ ಸಮಾಜಕ್ಕೂ ನಡುವೆ ಅನೇಕ ಸಾವಿರ ವರ್ಷಗಳ ಅಂತರವಿದೆ—ಪ್ರಭುತ್ವವು ಆಗ ಇದ್ದಿತೆನ್ನುವುದಕ್ಕೆ ಯಾವ ಗುರುತೂ ಇರಲಿಲ್ಲ. ಸಂಪ್ರದಾಯ, ಪ್ರಮಾಣ, ಗೌರವ ಇವುಗಳ ಪ್ರಾಬಲ್ಯವನ್ನೂ, ಕುಲದ ಹಿರಿಯರು ಅಧಿಕಾರ ಹೊಂದಿರುವುದನ್ನೂ ಆ ಕಾಲದ ಸಮಾಜದಲ್ಲಿ ಕಾಣುತ್ತೇವೆ; ಕೆಲವು ವೇಳೆ ಈ ಅಧಿಕಾರವನ್ನು ಹೆಂಗಸರಿಗೆ ಕೊಡಲಾಗುತ್ತಿತ್ತು,—ತುಳಿಯಲ್ಪಟ್ಟಿರುವ ಮತ್ತು ದಬ್ಬಾಳಿಕೆಗೆ ಒಳಗಾಗಿರುವ ಇಂದಿನ ಹೆಂಗಸರ ಸ್ಥಿತಿಯಂತೆ ಅಂದಿನ ಹೆಂಗಸರ ಸ್ಥಿತಿ ಇರಲಿಲ್ಲ. ಆದರೆ ಇತರರನ್ನು ಆಳುವುದಕ್ಕಾಗಿ ಬೇರೆ ಇರಿಸಲ್ಪಟ್ಟಿರುವ ಜನರ ಒಂದು ವಿಶೇಷ ವಿಭಾಗವನ್ನೂ, ಮತ್ತು ಹೀಗೆ ಆಳುವುದಕ್ಕಾಗಿ, ಮತ್ತು ಆ ಉದ್ದೇಶದಿಂದ, ಬಲಾತ್ಕಾರದ ಸಲಕರಣೆಯೊಂದನ್ನು, ಹಿಂಸೆಯ ಸಲಕರಣೆಯೊಂದನ್ನು, ವ್ಯವಸ್ಥಾಪೂರ್ವಕವಾಗಿಯೂ ಶಾಶ್ವತವಾಗಿಯೂ ಪ್ರಯೋಗ ಮಾಡುವುದನ್ನೂ ಆ ಕಾಲದಲ್ಲಿ ನಾವೆಲ್ಲೂ ಕಾಣುವುದಿಲ್ಲ. ನೀವೆಲ್ಲರೂ ಅರಿತಿರುವಂತೆ ಸಧ್ಯದ ಕಾಲದಲ್ಲಿ ಸಶಸ್ತ್ರ ಸೈನ್ಯಪಡೆಗಳು, ಕಾರಾಗೃಹಗಳು ಮತ್ತು ಇತರರ ಮನಸ್ಸನ್ನು ಬಲಾತ್ಕಾರದಿಂದ ಅಧೀನವಾಗಿಟ್ಟುಕೊಳ್ಳಲು ಉಪಯೋಗಿಸುವ ಇತರ ಸಾಧನಗಳು, ಇವುಗಳೆಲ್ಲವೂ ಆ ಬಲಾತ್ಕಾರದ ಸಲಕರಣೆಯ, ಹಿಂಸೆಯ ಸಲಕರಣೆಯ ಪ್ರತಿನಿಧಿಗಳಾಗಿವೆ; ಇವುಗಳೆಲ್ಲವೂ ಕೂಡಿದರೆ ಅದು ಪ್ರಭುತ್ವದ ಸತ್ವವಾಗುವುದು.

ಬೂರ್ಜ್ವಾ ಪಂಡಿತರುಗಳು ಪ್ರತಿಪಾದಿಸಿರುವಂತಹ ಧಾರ್ಮಿಕ ಬೋಧನೆಗಳಿಂದು ಕರೆಯಲ್ಪಡುವ ಸಿದ್ಧಾಂತಗಳಿಂದಲೂ, ವಾಕ್‌ತಂತ್ರಗಳಿಂದಲೂ, ತಾತ್ವಿಕ ವಾದಸರಣಿಗಳಿಂದಲೂ, ಬಿಡಿಸಿಕೊಂಡು, ವಿಷಯದ ನಿಜವಾದ ಸತ್ವವನ್ನು ಕಂಡು ಹಿಡಿಯಲು ಪ್ರಯತ್ನಿಸಿದರೆ, ಪ್ರಭುತ್ವವೆನ್ನುವುದು ವಾಸ್ತವವಾಗಿ ಮಾನವ ಸಮಾಜದಿಂದ ಬೇರ್ಪಟ್ಟು ಹೊರಬಂದ ಅಂತಹ ಆಳ್ವಿಕೆಯ ಸಲಕರಣೆಯಾಗಿದೆ ಯೆಂಬುದನ್ನು ನಾವು ಕಾಣುತ್ತೇವೆ. ಆಳುವುದನ್ನು ಬಿಟ್ಟು ಬೇರೆ ಯಾವ ಕೆಲಸವನ್ನೂ ಮಾಡದ ಮನುಷ್ಯರ ವಿಶೇಷ ಗುಂಪೊಂದು ಯಾವಾಗ ಉದ್ಭವಿಸುತ್ತದೋ ಮತ್ತು ಹಾಗೆ ಆಳುವುದಕ್ಕಾಗಿ, ಕಾರಾಗೃಹಗಳು, ವಿಶೇಷ ಪಡೆಗಳು, ಸೈನ್ಯಗಳು ಮುಂತಾದ ಬಲಾತ್ಕಾರದ ಮತ್ತು ಇತರರ ಮನಸ್ಸನ್ನು ಬಲಪ್ರಯೋಗದ ಮೂಲಕ ಅಧೀನ ಮಾಡಿಕೊಳ್ಳುವ ವಿಶೇಷ ಸಲಕರಣೆಯೊಂದು ಅವರಿಗೆ ಅಗತ್ಯವಾದಾಗ—ಆಗ ಪ್ರಭುತ್ವವು ಉದ್ಭವಿಸುತ್ತದೆ.

ಜಮೀನು-ದಾಸನು ಜಮೀನಿಗೆ ಬದ್ಧನಾಗಿರುವನು. ಅದರಲ್ಲಿ ಉತ್ಪತ್ತಿಯಾಗುವ ಫಲವನ್ನು ಜಮೀನಿನ ಯಜಮಾನನಿಗೆ ಒಪ್ಪಿಸಿ ಬಿಡುತ್ತಾನೆ. ಸ್ವತಂತ್ರ ಕೆಲಸಗಾರನಾದರೋ ತನ್ನನ್ನೇ ಮಾರಿಕೊಳ್ಳುತ್ತಾನೆ, ಸ್ವಲ್ಪ ಸ್ವಲ್ಪವಾಗಿ ಮಾರಿಕೊಳ್ಳುತ್ತಾನೆ. ಕಚ್ಚಾಪದಾರ್ಥಗಳ, ಕೆಲಸದ ಸಲಕರಣೆಗಳ ಮತ್ತು ಜೀವನಕ್ಕೆ ಅಗತ್ಯವಾದ ವಸ್ತುಗಳ ಮಾಲೀಕರಾದ ಬಂಡವಾಳಗಾರರ ಪೈಕಿ ಯಾರು ಹೆಚ್ಚು ಹಣವನ್ನು ಕೊಡುತ್ತಾರೋ ಅವರಿಗೆ ಸ್ವತಂತ್ರ ಕೆಲಸಗಾರನು ಪ್ರತಿದಿನವೂ ತನ್ನ ಜೀವನದ ಎಂಟು, ಹತ್ತು, ಹನ್ನೆರಡು ಅಥವಾ ಹದಿನೈದು ಗಂಟೆಗಳನ್ನು ಹರಾಜಿನಲ್ಲಿ ಮಾರುವಂತೆ ಮಾರುತ್ತಾನೆ. ಕೆಲಸಗಾರನು ಮಾಲೀಕನಿಗಾಗಲಿ ಅಥವಾ ಜಮೀನಿಗಾಗಲಿ ಸೇರಿದವನಲ್ಲ. ಆದರೆ ಅವನ ನಿತ್ಯಜೀವನದ ಎಂಟು, ಹತ್ತು, ಹನ್ನೆರಡು ಅಥವಾ ಹದಿನೈದು ಗಂಟೆಗಳು ಅವುಗಳನ್ನು ಕೊಂಡವನಿಗೆ ಸೇರುವುವು. ತನಗೆ ಇಷ್ಟಬಂದಾಗ, ತಾನು ಕೆಲಸ ಮಾಡುತ್ತಿರುವ ಬಂಡವಾಳಗಾರನನ್ನು ಕೆಲಸಗಾರನು ಬಿಟ್ಟುಬಿಡಬಹುದು; ಕೆಲಸಗಾರನಿಂದ ಯಾವ ಲಾಭವೂ ಸಿಕ್ಕದಿದ್ದಾಗ ಅಥವಾ ನಿರೀಕ್ಷಿಸಿದ್ದಷ್ಟು ಲಾಭ ದೊರೆಯದಿದ್ದಾಗ ಬಂಡವಾಳಗಾರನು ಅವನನ್ನು ವಜಾ ಮಾಡಬಹುದು. ಆದರೆ ತನ್ನ ದುಡಿಯುವ ಶಕ್ತಿಯ ಮಾರಾಟದಿಂದಲೇ ಜೀವನ ನಡೆಸಬೇಕಾಗಿರುವ ಕೆಲಸಗಾರನು, ಕೊಳ್ಳುವವರ ಇಡೀ ವರ್ಗವನ್ನು, ಅಂದರೆ ಬಂಡವಾಳಗಾರರ ವರ್ಗವನ್ನು, ಬಿಟ್ಟುಬಿಡುವಂತಿಲ್ಲ. ಹಾಗೇನಾದರೂ ಮಾಡಿದರೆ ತನ್ನ ಜೀವನವನ್ನೇ ಅವನು ತ್ಯಜಿಸಬೇಕಾಗುವುದು. ಅವನು ಇದೇ ಬಂಡವಾಳಗಾರನಿಗಾಗಲೀ ಅಥವಾ ಅದೇ ಬಂಡವಾಳಗಾರನಿಗಾಗಲೀ ಸೇರಿದವನಲ್ಲ, ಇಡೀ ಬಂಡವಾಳಗಾರ ವರ್ಗಕ್ಕೆ ಸೇರಿದವನು. ಅಷ್ಟೇ ಅಲ್ಲ, ತನ್ನನ್ನು ಮಾರಿಕೊಳ್ಳುವುದು, ಅಂದರೆ ಬಂಡವಾಳಗಾರ ವರ್ಗದಲ್ಲಿ ತನ್ನ ದುಡಿಯುವ ಶಕ್ತಿಯನ್ನು ಕೊಳ್ಳುವವನನ್ನು ಕಂಡುಹಿಡಿಯುವುದು, ಕೆಲಸಗಾರನಿಗೆ ಸೇರಿದ್ದು.

ಸದ್ಯಕ್ಕೆ, ಬಂಡವಾಳ ಮತ್ತು ಕೂಲಿ ಕೆಲಸ ಇವುಗಳ ನಡುವೆ ಇರುವ ಸಂಬಂಧವನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸುವುದಕ್ಕೆ ಮುಂಚೆ, ಕೂಲಿಯ ನಿರ್ಧಾರದಲ್ಲಿ ಪರಿಶೀಲನೆಗೆ ಬರುವಂತಹ ಅತ್ಯಂತ ಸಾಮಾನ್ಯವಾದ ಸಂಬಂಧಗಳನ್ನು ಸಂಕ್ಷೇಪವಾಗಿ ತಿಳಿಸುತ್ತೇವೆ.

ಈಗಾಗಲೇ ನಾವು ಕಂಡಿರುವಂತೆ, ಕೂಲಿ ಎನ್ನುವುದು ಒಂದು ನಿರ್ದಿಷ್ಟ ಪದಾರ್ಥದ, ಅಂದರೆ ದುಡಿಯುವ ಶಕ್ತಿಯ, ಬೆಲೆಯಾಗಿದೆ. ಆದುದರಿಂದ ಇತರ ಯಾವುದೇ ಮಾರಾಟದ ಪದಾರ್ಥದ ಬೆಲೆಯನ್ನು ಯಾವ ನಿಯಮಗಳು ನಿರ್ಧರಿಸುವುವೋ ಅವುಗಳೇ ಕೂಲಿಯನ್ನು ಕೂಡ ನಿರ್ಧರಿಸುತ್ತವೆ. ಆದುದರಿಂದ, ಒಂದು ಪದಾರ್ಥದ ಬೆಲೆ ಹೇಗೆ ನಿರ್ಧರಿಸಲ್ಪಡುತ್ತದೆ? ಎಂಬ ಪ್ರಶ್ನೆ ಏಳುತ್ತದೆ.

## II

ಒಂದು ಪದಾರ್ಥದ ಬೆಲೆಯು ಯಾವುದರಿಂದ ನಿರ್ಧರಿಸಲ್ಪಡುತ್ತದೆ?

ಕೊಳ್ಳುವವರ ಮತ್ತು ಮಾರುವವರ ಮಧ್ಯೆ ಇರುವ ಪೈಪೋಟಿಯಿಂದ, ಗಿರಾಕಿಗೂ ಮತ್ತು ಸರಬರಾಜಿಗೂ ಇರುವ ಸಂಬಂಧದಿಂದ, ಪೈಪೋಟಿಯ ಮೂಲಕ ಒಂದು ಪದಾರ್ಥದ ಬೆಲೆಯು ನಿರ್ಧಾರವಾಗುವುದು. ಅಂತಹ ಪೈಪೋಟಿಗೆ ಮೂರು ಮುಖಗಳಿವೆ.

ಒಂದೇ ಪದಾರ್ಥವನ್ನು ಅನೇಕರು ಮಾರುತ್ತಾರೆ. ಅವುಗಳ ದರ್ಜೆಯಲ್ಲಿ ಯಾವ ವ್ಯತ್ಯಾಸವೂ ಇಲ್ಲದಿದ್ದರೆ, ಅತ್ಯಂತ ಕಮ್ಮಿ ಬೆಲೆಗೆ ಯಾವನು ಮಾರುತ್ತಾನೋ ಅವನು ಇತರರನ್ನು ವ್ಯಾಪಾರ ಕ್ಷೇತ್ರದಿಂದ ಓಡಿಸಿ ತಾನೇ ಅತ್ಯಂತ ಹೆಚ್ಚಾಗಿ ಮಾರಾಟ ಮಾಡುವುದು ಖಂಡಿತ. ಹೀಗೆ, ಮಾರುವವರು ಮಾರಾಟಕ್ಕಾಗಿ, ಗಿರಾಕಿಗಳಿಗಾಗಿ, ತಮ್ಮ ತಮ್ಮಲ್ಲೇ ಹೆಣಗಾಡುತ್ತಾರೆ. ಅವರಲ್ಲಿ ಪ್ರತಿಯೊಬ್ಬನೂ ಮಾರಲಿಚ್ಛಿಸುತ್ತಾನೆ, ಆದಷ್ಟು ಹೆಚ್ಚಾಗಿ ಮಾರಲಿಚ್ಛಿಸುತ್ತಾನೆ ಮತ್ತು ಸಾಧ್ಯವಾದರೆ ಇತರರಿಗೆ ಗಿರಾಕಿಗಳು ಸಿಕ್ಕದಂತೆ ತಾನೇ ಎಲ್ಲವನ್ನೂ ಮಾರಲಿಚ್ಛಿಸುತ್ತಾನೆ. ಆದುದರಿಂದ, ಒಬ್ಬನು ಮತ್ತೊಬ್ಬನಿಗಿಂತ ಕಮ್ಮಿ ಬೆಲೆಗೆ ಮಾರುತ್ತಾನೆ. ಪರಿಣಾಮವಾಗಿ ಮಾರುವವರ ನಡುವೆ ಪೈಪೋಟಿ ಏರ್ಪಡುವುದು; ಇದರಿಂದ ಅವರು ಮಾರುವ ಪದಾರ್ಥದ ಬೆಲೆಯು ಕೆಳಗಿಳಿಯುವುದು.

ಆದರೆ ಕೊಳ್ಳುವವರ ನಡುವೆ ಕೂಡ ಪೈಪೋಟಿ ಇರುತ್ತದೆ; ಇದು ಪದಾರ್ಥದ ಬೆಲೆ ಏರುವಂತೆ ಮಾಡುತ್ತದೆ.

ಕೊನೆಯದಾಗಿ, ಕೊಳ್ಳುವವರ ಮತ್ತು ಮಾರುವವರ ನಡುವೆ ಪೈಪೋಟಿ ಉಂಟಾಗುತ್ತದೆ; ಕೊಳ್ಳುವವರು ಆದಷ್ಟು ಕಮ್ಮಿ ಬೆಲೆಗೆ ಕೊಳ್ಳಲಿಚ್ಛಿಸುತ್ತಾರೆ, ಮಾರುವವರು ಆದಷ್ಟು ಹೆಚ್ಚು ಬೆಲೆಗೆ ಮಾರಲಿಚ್ಛಿಸುತ್ತಾರೆ. ಮೇಲೆ ಹೇಳಿರುವ ಪೈಪೋಟಿಯ ಎರಡು ಮುಖಗಳ ಮಧ್ಯೆ ಇರುವ ಸಂಬಂಧವು—ಅಂದರೆ ಕೊಳ್ಳುವವರ ಸೈನ್ಯದಲ್ಲಿ ಪೈಪೋಟಿ ಹೆಚ್ಚೋ ಅಥವಾ ಮಾರುವವರ ಸೈನ್ಯದಲ್ಲಿ ಪೈಪೋಟಿ ಹೆಚ್ಚೋ ಎನ್ನುವುದು—ಕೊಳ್ಳುವವರ ಮತ್ತು ಮಾರುವವರ ಮಧ್ಯೆ ಇರುವ ಪೈಪೋಟಿಯ ಪರಿಣಾಮವನ್ನು ನಿಶ್ಚಯಿಸುತ್ತದೆ. ಕೈಗಾರಿಕೆಯು ಎರಡು ಸೈನ್ಯಗಳನ್ನು ಎದರು ಬದುರಾಗಿ ರಣರಂಗಕ್ಕೆ ಕರೆತರುತ್ತದೆ. ಅವೆರಡರಲ್ಲಿ ಪ್ರತಿಯೊಂದು ಸೈನ್ಯದ ಒಳಗಡೆ ಅದರ ಸೈನಿಕರ ನಡುವೆಯೇ ಹೋರಾಟ ನಡೆಯುತ್ತಿರುತ್ತದೆ. ಯಾವ ಸೈನ್ಯದ ಒಳಗಡೆ ಕಮ್ಮಿ ಜಗಳವಿರುತ್ತದೋ ಅದು ತನ್ನ ಎದುರು ಸೈನ್ಯದ ಮೇಲೆ ವಿಜಯವನ್ನು ಸಂಪಾದಿಸುತ್ತದೆ.

ನೂರು ಮೂಟೆ ಹತ್ತಿ ಮಾರಾಟಕ್ಕಿದೆಯೆಂದು ಭಾವಿಸೋಣ ಆದರೆ ಸಾವಿರ ಮೂಟೆಗಳನ್ನು ಕೊಳ್ಳುವಷ್ಟು ಮಂದಿ ಇದ್ದಾರೆನ್ನೋಣ. ಈ ಉದಾಹರಣೆಯಲ್ಲಿ, ಗಿರಾಕಿಯು ಸರಬರಾಜಿನ ಹತ್ತರಷ್ಟಿದೆ. ಕೊಳ್ಳುವವರ ನಡುವೆ ಪೈಪೋಟಿಯು ಪ್ರಬಲವಾಗಿರುವುದು; ಅವರಲ್ಲಿ ಪ್ರತಿಯೊಬ್ಬನೂ ಒಂದು ಮೂಟೆಯನ್ನಾದರೂ, ಸಾಧ್ಯವಾದರೆ ನೂರು ಮೂಟೆಗಳನ್ನೂ, ಪಡೆಯಲಿಚ್ಛಿಸುತ್ತಾನೆ. ಈ ಉದಾಹರಣೆ ಕಾಲ್ಪನಿಕವಾದದ್ದಲ್ಲ. ವ್ಯಾಪಾರದ ಚರಿತ್ರೆಯಲ್ಲಿ ಹತ್ತಿಬೆಳೆ ಹಾಳಾದ ಕಾಲಗಳನ್ನು ನಾವು ಕಂಡಿದ್ದೇವೆ. ಆಗ ಕೆಲವು ಮಂದಿ ಬಂಡವಾಳಗಾರರು ಒಂದುಗೂಡಿ, ನೂರು ಮೂಟೆಗಳನ್ನಲ್ಲ, ಪ್ರಪಂಚದ ಇಡೀ ಹತ್ತಿಯ ಸಂಗ್ರಹವನ್ನೇ ಕೊಂಡುಕೊಳ್ಳಲು ಪ್ರಯತ್ನ ಪಟ್ಟಿದ್ದಾರೆ. ಆದುದರಿಂದ, ನಾವು ತೆಗೆದುಕೊಂಡಿರುವ ಉದಾಹರಣೆಯಲ್ಲಿ, ಹತ್ತಿ ಮೂಟೆಗಳಿಗೆ ಸ್ವಲ್ಪ ಹೆಚ್ಚು ಬೆಲೆಯನ್ನು ಕೊಡುತ್ತೇನೆಂದು ಮುಂದೆ ಬಂದು ಒಬ್ಬ ಕೊಳ್ಳುವವನು ಮತ್ತೊಬ್ಬನನ್ನು ವ್ಯಾಪಾರ ಕ್ಷೇತ್ರದಿಂದ ಹೊರದೂಡಲು ಯತ್ನಿಸುತ್ತಾನೆ. ತಮ್ಮ ಶತ್ರು ಸೈನ್ಯದಲ್ಲಿ ಅತ್ಯಂತ ಬಿರುಸಾದ ಹೋರಾಟ ನಡೆಯುತ್ತಿರುವುದನ್ನು ನೋಡಿ ಹತ್ತಿ ಮಾರುವವರು ತಮ್ಮ ನೂರು ಮೂಟೆಗಳೂ ಮಾರಾಟವಾಗುವುದು ಖಂಡಿತವೆಂದು ತಿಳಿದುಕೊಳ್ಳುತ್ತಾರೆ. ತಮ್ಮ ವೈರಿಗಳು ತಮ್ಮ ತಮ್ಮಲ್ಲೇ ಪೈಪೋಟಿ ನಡೆಸುತ್ತಾ ಹತ್ತಿಯ ಬೆಲೆಯನ್ನು

ಹೆಚ್ಚಿಸುತ್ತಿರುವಾಗ, ತಾವೂ ಕೂಡ ಜಗಳವಾಡಿ ಹತ್ತಿಯ ಬೆಲೆಯನ್ನು ಇಳಿಸದಂತೆ ಹುಷಾರಾಗಿರುತ್ತಾರೆ. ಹೀಗೆ ಮಾರುವವರ ಶಿಬಿರದಲ್ಲಿ ಇದ್ದಕ್ಕಿದ್ದಂತೆ ಶಾಂತಿ ನೆಲಸುತ್ತದೆ. ಅವರೆಲ್ಲರೂ ಕೂಡಿ ವೇದಾಂತಿಗಳಂತೆ ಕೈ ಕಟ್ಟಿಕೊಂಡು ಒಬ್ಬನೇ ಮನುಷ್ಯನಂತೆ ಕೊಳ್ಳುವವರನ್ನು ಎದುರಿಸುತ್ತಾರೆ. ಕೊಳ್ಳುವವರ ಪೈಕಿ ಅತ್ಯಂತ ಕಾತುರರಾಗಿರುವವರು ಕೂಡ ಕೊಡಬಲ್ಲ ಬೆಲೆಗೆ ಒಂದು ನಿರ್ದಿಷ್ಟ ಮಿತಿಯೇನಾದರೂ ಇಲ್ಲದಿದ್ದ ಪಕ್ಷದಲ್ಲಿ, ಮಾರುವವರು ತಮ್ಮ ಮನಸ್ಸಿಗೆ ಬಂದ ಬೆಲೆಯನ್ನು ಕೇಳಿ ಬಿಡುತ್ತಿದ್ದರು.

ಆದುದರಿಂದ ಒಂದು ಪದಾರ್ಥಕ್ಕಿರುವ ಗಿರಾಕಿಗಿಂತ ಅದರ ಸರಬರಾಜು ಕಮ್ಮಿ ಇದ್ದರೆ, ಮಾರುವವರ ನಡುವೆ ಪೈಪೋಟಿಯೇ ಇರುವುದಿಲ್ಲ ಅಥವಾ ಬಹಳ ಕಮ್ಮಿ ಪೈಪೋಟಿ ಇರುತ್ತದೆ. ಈ ಪೈಪೋಟಿಯು ಯಾವ ಪ್ರಮಾಣದಲ್ಲಿ ಕಮ್ಮಿಯಾಗುತ್ತದೆಯೋ ಅದೇ ಪ್ರಮಾಣದಲ್ಲಿ ಕೊಳ್ಳುವವರ ನಡುವೆ ಪೈಪೋಟಿ ಹೆಚ್ಚಾಗುತ್ತದೆ. ಪರಿಣಾಮವಾಗಿ ಪದಾರ್ಥದ ಬೆಲೆ ಹೆಚ್ಚಾಗಿಯೋ ಕಮ್ಮಿಯಾಗಿಯೋ ಏರುತ್ತದೆ.

ಇದಕ್ಕೆ ಪ್ರತಿಯಾದ ಪರಿಣಾಮವುಳ್ಳ ಸಂದರ್ಭವು ಇನ್ನೂ ಹೆಚ್ಚು ಬಾರಿ ಉಂಟಾಗುವುದು ಎಲ್ಲರಿಗೂ ಗೊತ್ತಿರುವ ವಿಷಯ. ಗಿರಾಕಿಗಿಂತ ಸರಬರಾಜು ಬಹಳ ಹೆಚ್ಚಾಗಿರುವುದು; ಮಾರುವವರ ಮಧ್ಯೆ ವಿಪರೀತ ಪೈಪೋಟಿ; ಕೊಳ್ಳುವವರು ಸಾಕಷ್ಟು ಇಲ್ಲದಿರುವುದು; ಹಾಸ್ಯಾಸ್ಪದವಾದಷ್ಟು ಕಮ್ಮಿ ಬೆಲೆಗಳಿಗೆ ಪದಾರ್ಥಗಳ ಮಾರಾಟ.

ಆದರೆ ಬೆಲೆಗಳು ಏರುವುದು ಅಥವಾ ಇಳಿಯುವುದು ಎನ್ನುವುದರ ಅರ್ಥವೇನು? ಹೆಚ್ಚು ಬೆಲೆ, ಕಮ್ಮಿ ಬೆಲೆ ಎನ್ನುವುದರ ಅರ್ಥವೇನು? ಸೂಕ್ಷ್ಮದರ್ಶಿಯ ಮೂಲಕ ನೋಡಿದರೆ ಸಣ್ಣ ಮರಳೂ ಕೂಡ ದೊಡ್ಡದಾಗಿ ಕಾಣುವುದು ಮತ್ತು ಪರ್ವತದೊಂದಿಗೆ ಹೋಲಿಸಿ ನೋಡಿದರೆ ಗೋಪುರವು ಸಣ್ಣದಾಗಿರುವುದು. ಸರಬರಾಜು ಮತ್ತು ಗಿರಾಕಿಗಳ ನಡುವೆ ಇರುವ ಸಂಬಂಧವು ಬೆಲೆಯನ್ನು ನಿರ್ಧರಿಸುವುದಾದರೆ, ಸರಬರಾಜು ಮತ್ತು ಗಿರಾಕಿಗಳ ನಡುವೆ ಇರುವ ಸಂಬಂಧವನ್ನು ಯಾವುದು ನಿರ್ಧರಿಸುತ್ತದೆ?








...ನೆಯ ಬಂಡವಾಳಗಾರನನ್ನು ಕೇಳೋಣ. ಅವನು ಒಂದು ಕ್ಷಣಕೂಡ ಚಿಂತಿಸುವುದಿಲ್ಲ. ಮತ್ತೊಬ್ಬ ಅಲೆಕ್ಸಾಂಡರ್ ಮಹಾಶಯನಂತೆ, ಈ ತಾತ್ವಿಕ ಗಂಟನ್ನು ಅಂಕಗಣಿತದ ಸಹಾಯದಿಂದ ಕತ್ತರಿಸುತ್ತಾನೆ. “ನಾನು ಮಾರುವ ಪದಾರ್ಥಗಳನ್ನು ಉತ್ಪತ್ತಿ ಮಾಡಲು ನನಗೆ 100 ಮಾರ್ಕುಗಳು ವೆಚ್ಚವಾಗಿದ್ದು, ಅವುಗಳ ಮಾರಾಟದಿಂದ, ಒಂದು ವರ್ಷದೊಳಗಾಗಿ, 110 ಮಾರ್ಕುಗಳು ಬಂದರೆ—ಅದನ್ನು ನ್ಯಾಯವಾದ ಮತ್ತು ಪ್ರಾಮಾಣಿಕವಾದ ಲಾಭ ಎನ್ನುತ್ತೇವೆ. ಆದರೆ ಮಾರಾಟದಲ್ಲಿ 120 ಅಥವಾ 130 ಮಾರ್ಕುಗಳು ಸಿಕ್ಕಿದರೆ, ಅದು ಹೆಚ್ಚಿನ ಲಾಭ; 200 ಮಾರ್ಕುಗಳೇನಾದರೂ ಸಿಕ್ಕಿದ ಪಕ್ಷದಲ್ಲಿ, ಅದು ಅಸಾಧಾರಣವಾದ, ವಿಪರೀತ ಲಾಭ” ಎಂದು ಬಂಡವಾಳಗಾರನು ನಮಗೆ ಹೇಳುತ್ತಾನೆ. ಆದುದರಿಂದ ಬಂಡವಾಳಗಾರನು ಯಾವುದರ ಮೂಲಕ ತನ್ನ ಲಾಭವನ್ನು ಅಳೆಯುತ್ತಾನೆ? ತನ್ನ ಪದಾರ್ಥವನ್ನು ಉತ್ಪತ್ತಿ ಮಾಡಲು ಆಗುವ ವೆಚ್ಚದ ಮೂಲಕ. ವಿನಿಮಯದಲ್ಲಿ ತನ್ನ ಪದಾರ್ಥಕ್ಕೆ ಬದಲಾಗಿ ಅದಕ್ಕಿಂತಲೂ ಕಮ್ಮಿ ವೆಚ್ಚಕ್ಕೆ ಉತ್ಪತ್ತಿಯಾದ ಇತರ ಪದಾರ್ಥಗಳು ಅವನಿಗೆ ದೊರಕಿದರೆ, ಅವನು ನಷ್ಟ ಹೊಂದುತ್ತಾನೆ. ತನ್ನ ಪದಾರ್ಥಕ್ಕೆ ಬದಲಾಗಿ ಅದಕ್ಕಿಂತಲೂ ಹೆಚ್ಚು ವೆಚ್ಚಕ್ಕೆ ಉತ್ಪತ್ತಿಯಾದ ಇತರ ಪದಾರ್ಥಗಳು ಅವನಿಗೆ ದೊರೆತರೆ, ಅವನು ಲಾಭ ಪಡೆಯುತ್ತಾನೆ. ತನ್ನ ಪದಾರ್ಥದ ವಿನಿಮಯ ಮೌಲ್ಯವು ಸೊನ್ನೆ ಗುರ್ತಿಗಿಂತ—ಉತ್ಪತ್ತಿಯ ವೆಚ್ಚಕ್ಕಿಂತ—ಎಷ್ಟರ ಮಟ್ಟಿಗೆ ಮೇಲೆ ಇದೆ ಅಥವಾ ಕೆಳಗೆ ಇದೆ ಎನ್ನುವುದನ್ನು ನೋಡಿ ಅದಕ್ಕೆ ತಕ್ಕಂತೆ ತನ್ನ ಲಾಭವು ಏರಿರುವುದನ್ನು ಅಥವಾ ಇಳಿದಿರುವುದನ್ನು ಲೆಕ್ಕಾಚಾರ ಮಾಡುತ್ತಾನೆ.

ಸರಬರಾಜು ಮತ್ತು ಗಿರಾಕಿಗಳ ಮಧ್ಯೆ ಇರುವ ಸಂಬಂಧವು ಬದಲಾವಣೆ ಹೊಂದುತ್ತಿರುವುದರಿಂದ ಬೆಲೆಗಳು ಈಗ ಏರುವಂತೆಯೂ ಮತ್ತು ಅನಂತರ ಇಳಿಯುವಂತೆಯೂ ಹೇಗೆ ಆಗುತ್ತವೆಂಬುದನ್ನು ನಾವು ನೋಡಿದ್ದೇವೆ. ಸಾಕಾದಷ್ಟು ಸರಬರಾಜಿಲ್ಲದೆಯೋ ಅಥವಾ ಗಿರಾಕಿ ವಿಶೇಷವಾಗಿ ಹೆಚ್ಚಾದುದರಿಂದಲೋ ಒಂದು ಪದಾರ್ಥದ ಬೆಲೆಯು ಬಹಳವಾಗಿ ಏರಿದರೆ, ಅದೇ ಪ್ರಮಾಣದಲ್ಲಿ ಬೇರೊಂದು ಪದಾರ್ಥದ ಬೆಲೆಯು ಇಳಿದಿರಬೇಕು. ಏಕೆಂದರೆ ಒಂದು ಪದಾರ್ಥದ ಬೆಲೆಯು, ಆ ಪದಾರ್ಥಕ್ಕೆ ಬದಲಾಗಿ ವಿನಿಮಯದಲ್ಲಿ ಇತರ ಪದಾರ್ಥಗಳು ದೊರಕುವ

ಪ್ರಮಾಣವನ್ನು ಹಣದ ರೂಪದಲ್ಲಿ ವ್ಯಕ್ತಪಡಿಸುತ್ತದೆ ಅಷ್ಟೆ. ಉದಾಹರಣೆಗೆ, ಒಂದು ಗಜ ರೇಷ್ಮೆ ಬಟ್ಟೆಯ ಬೆಲೆಯು ಐದು ಮಾರ್ಕುಗಳಿಂದ ಆರು ಮಾರ್ಕುಗಳಿಗೆ ಏರಿದರೆ, ರೇಷ್ಮೆಯ ಸಂಬಂಧದಲ್ಲಿ ಬೆಳ್ಳಿಯ ಬೆಲೆ ಇಳಿದಿದೆಯೆನ್ನಬಹುದು. ಹಾಗೆಯೇ. ವ್ಯತ್ಯಾಸವಾಗದೆ ಹಳೆಯ ಬೆಲೆಗಳಲ್ಲೇ ಮಾರಾಟವಾಗುತ್ತಿರುವ ಇತರ ಎಲ್ಲಾ ಪದಾರ್ಥಗಳ ಬೆಲೆಗಳೂ ಕೂಡ ರೇಷ್ಮೆಯ ಸಂಬಂಧದಲ್ಲಿ ಇಳಿದಿವೆ. ಒಂದಷ್ಟು ರೇಷ್ಮೆಯನ್ನು ಕೊಳ್ಳುವುದಕ್ಕಾಗಿ ಆ ಪದಾರ್ಥಗಳನ್ನು ಮೊದಲಿಗಿಂತ ಹೆಚ್ಚಾಗಿ ಕೊಡಬೇಕಾಗುವುದು. ಒಂದು ಪದಾರ್ಥದ ಬೆಲೆ ಹೆಚ್ಚಾಗುವುದರಿಂದ ಆಗುವ ಪರಿಣಾಮವೇನು? ಏಳಿಗೆ ಹೊಂದುತ್ತಿರುವ ಆ ಕೈಗಾರಿಕಾ ಶಾಖೆಗೆ ಬೇಕಾದಷ್ಟು ಬಂಡವಾಳವು ನುಗ್ಗುತ್ತದೆ. ಆ ಕೈಗಾರಿಕೆಯ ಶಾಖೆಯಲ್ಲಿ ಸಿಕ್ಕುವ ಲಾಭವು ಸಾಧಾರಣ ಮಟ್ಟಕ್ಕಿಳಿಯುವ ವರೆಗೂ, ಅಲ್ಲ, ಅತಿ ಉತ್ಪತ್ತಿಯಿಂದಾಗಿ, ಆ ಕೈಗಾರಿಕೆಯ ಪದಾರ್ಥದ ಬೆಲೆಯು ಉತ್ಪತ್ತಿಯ ವೆಚ್ಚಕ್ಕಿಂತ ಕಮ್ಮಿಯಾಗುವ ವರೆಗೂ, ಲಾಭದಾಯಕವಾದ ಆ ಕೈಗಾರಿಕೆಯ ಕ್ಷೇತ್ರಕ್ಕೆ ಬಂಡವಾಳವು ನುಗ್ಗುತ್ತಲೇ ಇರುವುದು.

ಇದಕ್ಕೆ ಪ್ರತಿಯಾಗಿ, ಒಂದು ಪದಾರ್ಥದ ಬೆಲೆಯು ಅದರ ಉತ್ಪತ್ತಿಯ ವೆಚ್ಚಕ್ಕಿಂತ ಕಮ್ಮಿಯಾದರೆ, ಆ ಪದಾರ್ಥದ ಉತ್ಪತ್ತಿಯಿಂದ ಬಂಡವಾಳವು ವಾಪಸಾಗುತ್ತದೆ. ಬಂಡವಾಳವು ಈರೀತಿ ಓಡಿ ಹೋಗುವುದರಿಂದ ಅಂತಹ ಪದಾರ್ಥದ ಉತ್ಪತ್ತಿ, ಮತ್ತು ಸರಬರಾಜು ಕಮ್ಮಿಯಾಗುತ್ತಾ ಹೋಗುವುದು. ಆ ಕೈಗಾರಿಕೆಯೇನಾದರೂ ಹಳೆಯದಾಗಿ ಬಿಟ್ಟಿದ್ದರೆ, ಅದು ಕೊನೆಗೆ ನಾಶ ಹೊಂದುತ್ತದೆ. ಇಲ್ಲದಿದ್ದರೆ ಗಿರಾಕಿಯ ಮಟ್ಟಕ್ಕೆ ಉತ್ಪತ್ತಿ ಇಳಿಯುವವರೆಗೂ ಪರಿಣಾಮವಾಗಿ ಪದಾರ್ಥದ ಬೆಲೆಯು ಮತ್ತೆ ಉತ್ಪತ್ತಿಯ ವೆಚ್ಚದ ಮಟ್ಟಕ್ಕೆ ಬರುವವರೆಗೂ, ಅಲ್ಲ, ಸರಬರಾಜು ಗಿರಾಕಿಗಿಂತ ಕಮ್ಮಿಯಾಗಿ ಪದಾರ್ಥದ ಬೆಲೆಯು ಅದರ ಉತ್ಪತ್ತಿಯ ವೆಚ್ಚಕ್ಕಿಂತ ಮೇಲೆ ಏರುವವರೆಗೂ, ಉತ್ಪತ್ತಿ ಕಮ್ಮಿಯಾಗುತ್ತಲೇ ಇರುವುದು. ಏಕೆಂದರೆ ಒಂದು ಪದಾರ್ಥದ ತಾತ್ಕಾಲಿಕ ಬೆಲೆಯು ಯಾವಾಗಲೂ ಅದರ ಉತ್ಪತ್ತಿಯ ವೆಚ್ಚಕ್ಕಿಂತ ಮೇಲೆಯೋ ಅಥವಾ ಕೆಳಗೋ ಇರುವುದು.

ಒಂದು ಕೈಗಾರಿಕೆಯ ಕ್ಷೇತ್ರದಿಂದ ಮತ್ತೊಂದು ಕೈಗಾರಿಕೆಯ ಕ್ಷೇತ್ರಕ್ಕೆ ಬಂಡವಾಳವು ನಿರಂತರವಾಗಿ ಹೇಗೆ ಪ್ರವೇಶಿಸುತ್ತದೆ ಮತ್ತು ವಾಪಸಾಗುತ್ತದೆ

ಎನ್ನುವುದನ್ನು ನಾವು ಕಾಣುತ್ತೇವೆ. ಒಂದು ಕೈಗಾರಿಕೆಯ ಪದಾರ್ಥದ ಬೆಲೆಯು ಹೆಚ್ಚಾದರೆ, ಬಂಡವಾಳದ ಪ್ರವೇಶ ಬಹಳ ಹೆಚ್ಚುವುದು ; ಬೆಲೆ ಕಮ್ಮಿಯಾದರೆ, ಬಂಡವಾಳದ ವಾಪಸು ಬಹಳ ಹೆಚ್ಚಾಗುವುದು.

ಸರಬರಾಜು ಮಾತ್ರವಲ್ಲ, ಗಿರಾಕಿಯೂ ಕೂಡ ಉತ್ಪತ್ತಿಯ ವೆಚ್ಚದಿಂದ ನಿರ್ಧರಿಸಲ್ಪಡುವುದೆಂದು ಬೇರೊಂದು ದೃಷ್ಟಿಕೋಣದಿಂದ ನಾವು ತೋರಿಸಬಹುದು. ಆದರೆ ಇದು ಪ್ರಕೃತ ವಿಷಯದಿಂದ ನಮ್ಮನ್ನು ಬಹುದೂರ ತೆಗೆದುಕೊಂಡು ಹೋಗುವುದು.

ಸರಬರಾಜು ಮತ್ತು ಗಿರಾಕಿಗಳ ಏರಿಳಿತಗಳು ಪದಾರ್ಥದ ಬೆಲೆಯನ್ನು ಸತತವಾಗಿ ಉತ್ಪತ್ತಿಯ ವೆಚ್ಚದ ಮಟ್ಟಕ್ಕೆ ಹೇಗೆ ಹಿಂತರುತ್ತವೆಂಬುದನ್ನು ನಾವು ಈಗತಾನೇ ನೋಡಿದ್ದೇವೆ. ಪದಾರ್ಥದ ವಾಸ್ತವ ಬೆಲೆಯು, ಯಾವಾಗಲೂ ಅದರ ಉತ್ಪತ್ತಿಯ ವೆಚ್ಚಕ್ಕಿಂತ ಮೇಲೆಯೋ ಅಥವಾ ಕೆಳಗೋ ಇರುವುದೇನೋ ನಿಜ ; ಆದರೆ ಈ ಏರಿಳಿತಗಳು ಪರಸ್ಪರ ಸರಿತೂಗುತ್ತವೆ. ಹೀಗಾಗಿ, ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ, ಕೈಗಾರಿಕೆಯ ಏರಿಳಿತಗಳನ್ನು ಒಟ್ಟಿಗೆ ನೋಡಿದರೆ, ಪದಾರ್ಥಗಳು ತಮ್ಮ ಉತ್ಪತ್ತಿಯ ವೆಚ್ಚಕ್ಕನುಸಾರವಾಗಿ ಒಂದಕ್ಕೊಂದು ವಿನಿಮಯವಾಗುವುವು ; ಆದುದರಿಂದ ಅವುಗಳ ಬೆಲೆಯು ಉತ್ಪತ್ತಿಯ ವೆಚ್ಚದಿಂದ ನಿರ್ಧರಿಸಲ್ಪಡುತ್ತದೆ.

ಉತ್ಪತ್ತಿಯ ವೆಚ್ಚದಿಂದ ಬೆಲೆ ನಿರ್ಧರಿಸಲ್ಪಡುತ್ತದೆ ಎನ್ನುವುದನ್ನು ಅರ್ಥ ಶಾಸ್ತ್ರಜ್ಞರು ಹೇಳುವ ಅರ್ಥದಲ್ಲಿ ನಾವು ತಿಳಿದುಕೊಳ್ಳಬಾರದು. ಪದಾರ್ಥಗಳ ಸರಾಸರಿಯ ಬೆಲೆಯು ಉತ್ಪತ್ತಿಯ ವೆಚ್ಚಕ್ಕೆ ಸಮನಾಗಿರುವುದೆಂದೂ, ಇದೊಂದು ನಿಯಮವೆಂದೂ ಅರ್ಥಶಾಸ್ತ್ರಜ್ಞರು ಹೇಳುತ್ತಾರೆ. ಬೆಲೆ ಏರಿದರೆ ಅನಂತರ ಅದಕ್ಕೆ ಸರಿಯಾಗಿ ಇಳಿಯುವುದೂ, ಬೆಲೆ ಇಳಿದರೆ ಅನಂತರ ಅದಕ್ಕೆ ಸರಿಯಾಗಿ ಏರುವುದೂ ಈ ರೀತಿ ಪರಿಣಾಮವನ್ನುಂಟುಮಾಡುವ ಗೊತ್ತುಗುರಿಯಿಲ್ಲದ ಚಲನೆಯನ್ನು ಅರ್ಥಶಾಸ್ತ್ರಜ್ಞರು ಆಕಸ್ಮಿಕವೆಂದು ಭಾವಿಸುತ್ತಾರೆ. ಹಾಗೆ ನೋಡಿದರೆ, ಬೆಲೆಗಳ ಏರಿಳಿತಗಳೇ ನಿಯಮವೆಂದೂ, ಉತ್ಪತ್ತಿಯ ವೆಚ್ಚಕ್ಕನುಗುಣವಾಗಿ ಬೆಲೆ ನಿರ್ಧಾರವಾಗುವುದು ಆಕಸ್ಮಿಕವೆಂದು ಇತರ ಕೆಲವು ಅರ್ಥಶಾಸ್ತ್ರಜ್ಞರು ಹೇಳುವುದು ಕೂಡ ಅಷ್ಟೇ ಸರಿ ಎನ್ನಬಹುದು. ಆದರೆ ಹೆಚ್ಚು ಸೂಕ್ಷ್ಮವಾಗಿ ನೋಡಿ

ದರೆ, ಅತ್ಯಂತ ಭಯಂಕರವಾದ ವಿನಾಶವನ್ನು ಜೊತೆಗೆ ತರುವ ಈ ಏರಿಳಿತಗಳು, ಬಂಡವಾಳಗಾರ ಸಮಾಜವು ತನ್ನ ತಳಹದಿಯವರೆಗೂ ನಡುಗುವಂತೆ ಮಾಡುವ ಭೂಕಂಪದಂತಹ ಈ ಏರಿಳಿತಗಳು—ಇವೇ ತಮ್ಮ ಚಲನೆಯಿಂದ ಪದಾರ್ಥಗಳ ಬೆಲೆಯನ್ನು ಅವುಗಳ ಉತ್ಪತ್ತಿಯ ವೆಚ್ಚಕ್ಕೆ ತಕ್ಕಂತೆ ನಿರ್ಧರಿಸುತ್ತವೆ. ಗೊತ್ತು ಗುರಿಯಿಲ್ಲದ ಈ ಏರಿಳಿತಗಳ ಪೂರ್ಣ ಚಲನೆಯೇ ಅದಕ್ಕೆ ಅದರ ಕ್ರಮವನ್ನು ಕೊಡುತ್ತದೆ. ಈ ಕೈಗಾರಿಕಾ ಗೊಂದಲದಲ್ಲಿ, ವೃತ್ತದಲ್ಲಿ ನಡೆಯುವ ಈ ಚಲನೆಯಲ್ಲಿ, ಒಂದು ವೈಪರೀತ್ಯವನ್ನು ಇನ್ನೊಂದು ವೈಪರೀತ್ಯದ ಮೂಲಕ ಪೈಪೋಟಿಯು ಪರಿಹರಿಸುತ್ತದೆ ಎಂದು ಹೇಳಬಹುದು.

ಆದುದರಿಂದ ಪದಾರ್ಥದ ಬೆಲೆಯು ಅದರ ಉತ್ಪತ್ತಿಯ ವೆಚ್ಚಕ್ಕಿಂತ ಮೇಲಿರುವ ಕಾಲಾವಧಿಯನ್ನು ಅದರ ಬೆಲೆಯು ಉತ್ಪತ್ತಿಯ ವೆಚ್ಚಕ್ಕಿಂತ ಕೆಳಗಿಳಿಯುವ ಕಾಲಾವಧಿಯು ಪರಿಹರಿಸುವಂತಹ ವಿಧಾನದ ಮೂಲಕ, ಪದಾರ್ಥದ ಬೆಲೆಯು ಅದರ ಉತ್ಪತ್ತಿಯ ವೆಚ್ಚದಿಂದ ನಿರ್ಧಾರವಾಗುವುದನ್ನು ನಾವು ಕಾಣುತ್ತೇವೆ. ಆದರೆ ಈ ಮಾತು ಯಾವುದಾದರೂ ಒಂದು ಪ್ರತ್ಯೇಕವಾದ ಮತ್ತು ಒಂಟಿಯಾದ ಕೈಗಾರಿಕಾ ಪದಾರ್ಥಕ್ಕೆ ಅನ್ವಯಿಸುವುದಿಲ್ಲ, ಇಡೀ ಕೈಗಾರಿಕಾ ಶಾಖೆಗೆ ಮಾತ್ರ ಅನ್ವಯಿಸುತ್ತದೆ. ಪರಿಣಾಮವಾಗಿ, ಇದು ವೈಯಕ್ತಿಕ ಕೈಗಾರಿಕೋದ್ಯಮಿಗೆ ಅನ್ವಯಿಸುವುದಿಲ್ಲ, ಕೈಗಾರಿಕೋದ್ಯಮಿಗಳ ಇಡೀ ವರ್ಗಕ್ಕೆ ಮಾತ್ರ ಅನ್ವಯಿಸುತ್ತದೆ.

ಉತ್ಪತ್ತಿಯ ವೆಚ್ಚದಿಂದ ಬೆಲೆಯನ್ನು ನಿರ್ಧರಿಸುವುದು ಆ ಪದಾರ್ಥದ ಉತ್ಪತ್ತಿಗೆ ಅವಶ್ಯಕವಾದ ಕೆಲಸದ ಕಾಲದಿಂದ ಬೆಲೆಯನ್ನು ನಿರ್ಧರಿಸುವುದಕ್ಕೆ ಸಮ. ಏಕೆಂದರೆ ಉತ್ಪತ್ತಿಯ ವೆಚ್ಚದಲ್ಲಿ ಈ ಕೆಳಗಿನ ಅಂಶಗಳು ಸೇರಿವೆ:— 1. ಕಚ್ಚಾ ಪದಾರ್ಥಗಳು ಮತ್ತು ಸಲಕರಣೆಗಳ ಸವೆತ. ಈ ಕೈಗಾರಿಕಾ ಪದಾರ್ಥಗಳನ್ನು ತಯಾರಿಸಲು ಒಂದಷ್ಟು ದಿನಗಳು ಹಿಡಿದಿರುತ್ತದೆ. ಆದುದರಿಂದ ಅವುಗಳಲ್ಲಿ ಒಂದಷ್ಟು ಕೆಲಸದ ಕಾಲವು ಅಡಗಿದೆಯೆನ್ನಬಹುದು ಮತ್ತು 2. ನೇರವಾದ ಕೆಲಸ. ಇದೂ ಕೂಡ ಕಾಲದಿಂದಲೇ ಅಳೆಯಲ್ಪಡುವುದು.

ಪದಾರ್ಥಗಳ ಬೆಲೆಯನ್ನು ನಿಶ್ಚಯಿಸುವ ಸಾಮಾನ್ಯ ನಿಯಮಗಳೇ, ಕೆಲಸದ ಬೆಲೆಯಾದ ಕೂಲಿಯನ್ನು ಕೂಡ ನಿರ್ಧರಿಸುತ್ತವೆ.

ಸರಬರಾಜು ಮತ್ತು ಗಿರಾಕಿಗಳ ಸಂಬಂಧಕ್ಕೆ ತಕ್ಕಂತೆ, ದುಡಿಯುವ ಶಕ್ತಿಯನ್ನು ಮಾರುವ ಕೆಲಸಗಾರರ ನಡುವೆ ಇರುವ ಪೈಪೋಟಿಯು ತಾಳುವ ಸ್ವರೂಪಕ್ಕೆ ತಕ್ಕಂತೆ, ಕೂಲಿಯು ಏರುವುದು ಅಥವಾ ಇಳಿಯುವುದು. ಪದಾರ್ಥಗಳ ಬೆಲೆಗಳ ಏರಿಳಿತಗಳಿಗೆ ತಕ್ಕಂತೆ ಒಟ್ಟಿನಲ್ಲಿ ಕೂಲಿಯೂ ಏರಿಳಿಯುವುದು. ಆದರೆ ಈ ಏರಿಳಿತಗಳಲ್ಲಿ, ಕೆಲಸದ ಬೆಲೆಯು ಅವರ ಉತ್ಪತ್ತಿಯ ವೆಚ್ಚದಿಂದ ನಿರ್ಧರಿಸಲ್ಪಡುವುದು; ಅಂದರೆ ಕೆಲಸದ ಬೆಲೆಯು, ದುಡಿಯುವ ಶಕ್ತಿ ಎನ್ನುವ ಪದಾರ್ಥವನ್ನು ಉತ್ಪತ್ತಿ ಮಾಡಲು ಅವಶ್ಯಕವಾದ ಕೆಲಸದ ಕಾಲದಿಂದ ನಿರ್ಧರಿಸಲ್ಪಡುವುದು.

ಹಾಗಾದರೆ ದುಡಿಯುವ ಶಕ್ತಿಯ ಉತ್ಪತ್ತಿ ವೆಚ್ಚವೆನ್ನುವುದು ಯಾವುದು? ಕೆಲಸಗಾರನನ್ನು ಕೆಲಸಗಾರನಾಗಿ ಉಳಿಸಿಕೊಂಡು ಹೋಗುವುದಕ್ಕೂ ಮತ್ತು ಅವನನ್ನು ಕೆಲಸಗಾರನಾಗಿ ಬೆಳೆಸುವುದಕ್ಕೂ ಬೇಕಾದ ವೆಚ್ಚವೇ ದುಡಿಯುವ ಶಕ್ತಿಯ ಉತ್ಪತ್ತಿ ವೆಚ್ಚ.

ಆದುದರಿಂದ ಯಾವ ಕೆಲಸಕ್ಕೆ ಕಮ್ಮಿ ಕಾಲದ ತರಪೇತು ಬೇಕಾಗುತ್ತದೆಯೋ, ಆ ಕೆಲಸದ ಕೆಲಸಗಾರನ ಉತ್ಪತ್ತಿ ವೆಚ್ಚವು ಕಮ್ಮಿಯಾಗಿರುವುದು; ಅವನ ಕೆಲಸದ ಬೆಲೆಯೂ, ಅಂದರೆ ಅವನ ಕೂಲಿಯೂ, ಕಮ್ಮಿಯಾಗಿರುವುದು. ಹೆಚ್ಚು ಕಮ್ಮಿಯಾದ ತರಪೇತೂ ಅಗತ್ಯವಿಲ್ಲದೆ, ಕೆಲಸಗಾರನ ದೈಹಿಕ ಇರುವಿಕೆಯೇ ಸಾಕಾಗಿರುವಂತಹ ಕೈಗಾರಿಕಾ ಶಾಖೆಗಳಲ್ಲಿ, ಕೆಲಸಗಾರನ ಉತ್ಪತ್ತಿಗೆ ಅವಶ್ಯಕವಾದ ವೆಚ್ಚವು ಹೆಚ್ಚು ಕಮ್ಮಿ ಅವನು ಬದುಕಿರಲೂ ಮತ್ತು ಕೆಲಸ ಮಾಡಲು ಸಮರ್ಥನಾಗಿರಲೂ ಅವಶ್ಯಕವಾದ ಪದಾರ್ಥಗಳ ವೆಚ್ಚವಷ್ಟೇ ಆಗಿರುತ್ತದೆ. ಆದುದರಿಂದ ಅವನ ಬದುಕಿಗೆ ಅವಶ್ಯಕವಾದ ಪದಾರ್ಥಗಳ ಬೆಲೆಯು ಅವನ ಕೆಲಸದ ಬೆಲೆಯನ್ನು ನಿರ್ಧರಿಸುವುದು.

ಮತ್ತೊಂದು ಅಂಶವನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಉತ್ಪತ್ತಿಯ ವೆಚ್ಚವನ್ನು ಲೆಕ್ಕಾಚಾರ ಮಾಡುವಾಗ, ಆದುದರಿಂದ ಉತ್ಪತ್ತಿಯಾದ ಪದಾರ್ಥಗಳ ಬೆಲೆಯನ್ನು ಲೆಕ್ಕ ಹಾಕುವಾಗ, ತಯಾರಿಕೆಗಾರನು ಕೆಲಸದ ಸಲಕರಣೆಗಳ ಸವೆತವನ್ನೂ ಲೆಕ್ಕಕ್ಕೆ ತೆಗೆದು ಕೊಳ್ಳುತ್ತಾನೆ. ಉದಾಹರಣೆಗೆ, 1000 ಮಾರ್ಕು ಬೆಲೆ ಬಾಳುವ ಒಂದು ಯಂತ್ರವು ಹತ್ತು ವರ್ಷಗಳಲ್ಲಿ ಸವೆದು ಹೋದರೆ, ಹತ್ತು ವರ್ಷಗಳ ನಂತರ ಸವೆದು ಹೋಗಿರುವ ಯಂತ್ರವನ್ನು ಹೊಸ ಯಂತ್ರದಿಂದ

ಬದಲಾಯಿಸುವುದಕ್ಕಾಗಿ, ಪದಾರ್ಥಗಳ ಬೆಲೆಗೆ ಪ್ರತಿ ವರ್ಷವೂ ನೂರು ಮಾರ್ಕು ಗಳನ್ನು ಸೇರಿಸುತ್ತಾನೆ. ಅದೇ ರೀತಿಯಲ್ಲಿ ಸಾಧಾರಣ ದುಡಿಯುವ ಶಕ್ತಿಯ ಉತ್ಪತ್ತಿ ವೆಚ್ಚವನ್ನು ಲೆಕ್ಕ ಮಾಡುವಾಗ, ಕೆಲಸಗಾರರ ವಂಶವು ವೃದ್ಧಿಯಾಗಿ ಕೆಲಸ ಮಾಡಲಾಗದವರ ಸ್ಥಾನಗಳಿಗೆ ಹೊಸಬರು ದೊರಕುವಂತಾಗಲು, ವಂಶಾಭಿ ವೃದ್ಧಿಯ ವೆಚ್ಚವನ್ನೂ ಕೂಡ ದುಡಿಯುವ ಶಕ್ತಿಯ ಉತ್ಪತ್ತಿ ವೆಚ್ಚದಲ್ಲಿ ಸೇರಿಸ ಬೇಕು. ಈ ರೀತಿಯಲ್ಲಿ ಯಂತ್ರದ ಸವೆತವನ್ನು ಹೇಗೆ ಗಣನೆಗೆ ತೆಗೆದು ಕೊಳ್ಳ ಲಾಗುವುದೋ ಹಾಗೆಯೇ ಕೆಲಸಗಾರನು ಸವೆದು ಹೋಗುವುದನ್ನೂ ಗಣನೆಗೆ ತೆಗೆದು ಕೊಂಡಂತಾಗುತ್ತದೆ.

ಆದುದರಿಂದ ಸಾಧಾರಣ ದುಡಿಯುವ ಶಕ್ತಿಯ ಉತ್ಪತ್ತಿ ವೆಚ್ಚ ಯಾವುದೆಂದರೆ ಕೆಲಸಗಾರನ ಬದುಕಿಗೆ ಬೇಕಾದ ವೆಚ್ಚ ಮತ್ತು ಅವನ ಜಾಗಕ್ಕೆ ಮತ್ತೊಬ್ಬನನ್ನು ಸೃಷ್ಟಿಸುವುದಕ್ಕೆ ತಗಲುವ ವೆಚ್ಚ. ಕೆಲಸಗಾರನ ಜೀವನದ ಮತ್ತು ವಂಶಾಭಿವೃದ್ಧಿಯ ವೆಚ್ಚಗಳ ಬೆಲೆಯೇ ಅವನ ಕೂಲಿಯಾಗುವುದು. ಈ ರೀತಿ ನಿರ್ಧಾರ ಹೊಂದುವ ಕೂಲಿಯನ್ನು ಕನಿಷ್ಠ ಕೂಲಿ ಎನ್ನುತ್ತಾರೆ. ಉತ್ಪತ್ತಿಯ ವೆಚ್ಚದಿಂದ ಪದಾರ್ಥಗಳ ಬೆಲೆಯು ನಿರ್ಧಾರದಂತೆ, ಈ ಕನಿಷ್ಠ ಕೂಲಿಯೂ ಕೂಡ ಬಿಡಿ ವ್ಯಕ್ತಿಗೆ ಅನ್ವಯಿಸು ವುದಿಲ್ಲ, ಇಡೀ ಕೂಲಿಗಾರ ವರ್ಗಕ್ಕೆ ಅನ್ವಯಿಸುತ್ತದೆ. ಲಕ್ಷಾಂತರ ಮಂದಿ ವೈಯು ಕ್ತಿಕ ಕೆಲಸಗಾರರಿಗೆ ಜೀವನ ಸಾಗಿಸಲು ಮತ್ತು ವಂಶಾಭಿವೃದ್ಧಿ ಮಾಡಲು ಸಾಕಷ್ಟು ಕೂಡ ಸಿಕ್ಕುವುದಿಲ್ಲ; ಆದರೆ ಇಡೀ ಕೆಲಸಗಾರ ವರ್ಗದ ಕೂಲಿಯು ಪರಿಮಿತಗಳಲ್ಲಿ ಈ ಕನಿಷ್ಠ ಮಟ್ಟವನ್ನು ಮುಟ್ಟುತ್ತವೆ.

ಇತರ ಯಾವುದೇ ಪದಾರ್ಥದ ಬೆಲೆಯಂತೆ ಕೂಲಿಯನ್ನೂ ಕೂಡ ನಿರ್ಧರಿ ಸುವ ಅತ್ಯಂತ ಸಾಮಾನ್ಯ ನಿಯಮಗಳ ತಿಳುವಳಿಕೆಯನ್ನು ಪಡೆದು ಕೊಂಡ ನಂತರ, ಈಗ ನಮ್ಮ ವಿಷಯವನ್ನು ಇನ್ನೂ ಹೆಚ್ಚು ವಿಶಿಷ್ಟವಾಗಿ ಪರಿಶೀಲಿಸಬಹುದಾಗಿದೆ.

## III

ಕಚ್ಚಾ ಪದಾರ್ಥಗಳು, ಕೆಲಸದ ಸಲಕರಣೆಗಳು ಮತ್ತು ಜೀವನಕ್ಕೆ ಅಗತ್ಯ ವಾದ ಎಲ್ಲಾ ವಿಧವಾದ ಸಾಧನಗಳು ಇವೆಲ್ಲವೂ ಬಂಡವಾಳದ ಬೇರೆ ಬೇರೆ ಭಾಗ

ಗಳು. ಇವುಗಳ ಉಪಯೋಗದಿಂದ ಹೊಸ ಕಚ್ಚಾ ಪದಾರ್ಥಗಳು, ಹೊಸ ಕೆಲಸದ ಸಲಕರಣೆಗಳು ಮತ್ತು ಜೀವನಕ್ಕೆ ಅಗತ್ಯವಾದ ಹೊಸ ಸಾಧನಗಳು ಉತ್ಪತ್ತಿಯಾಗುತ್ತವೆ. ಬಂಡವಾಳದ ಈ ಎಲ್ಲಾ ವಿಭಾಗಗಳೂ ಕೂಡ ಕೆಲಸದಿಂದ ಸೃಷ್ಟಿಯಾದವುಗಳು, ಕೆಲಸದ ಉತ್ಪನ್ನಗಳು; ಅವುಗಳನ್ನು ಶೇಖರವಾಗಿರುವ ಕೆಲಸ ಎಂದು ಕರೆಯಬಹುದು. ಹೊಸ ಉತ್ಪತ್ತಿಗೆ ಶೇಖರವಾಗಿರುವ ಕೆಲಸವನ್ನೇ ಬಂಡವಾಳ ಎನ್ನುವುದು.

ಹೀಗೆಂದು ಅರ್ಥಶಾಸ್ತ್ರಜ್ಞರು ಹೇಳುತ್ತಾರೆ.

ನೀಗ್ರೋ ಗುಲಾಮನೆಂದರೆ ಯಾರು ? ಕಪ್ಪು ವರ್ಗಕ್ಕೆ ಸೇರಿದ ಮನುಷ್ಯ. ಈ ವಿವರಣೆ ಎಷ್ಟು ಚನ್ನಾಗಿದೆಯೋ ? ಮೇಲೆ ಹೇಳಿರುವ ವಿವರಣೆಯೂ ಅಷ್ಟೇ ಚೆನ್ನಾಗಿದೆ !

ನೀಗ್ರೋ ಮನುಷ್ಯ ಎಂದರೆ ನೀಗ್ರೋ ಮನುಷ್ಯ ಅಷ್ಟೇ. ಕೆಲವು ನಿರ್ದಿಷ್ಟ ಸಂಬಂಧಗಳಲ್ಲಿ ಮಾತ್ರ ಅವನು ಗುಲಾಮನಾಗುತ್ತಾನೆ. ಹತ್ತಿ ನೂಲನ್ನು ತಯಾರಿಸುವ ಜೆನ್ನಿಯು ಹತ್ತಿಯಿಂದ ನೂಲನ್ನು ತೆಗೆಯುವ ಯಂತ್ರ ಅಷ್ಟೆ. ಕೆಲವು ನಿರ್ದಿಷ್ಟ ಸಂಬಂಧಗಳಲ್ಲಿ ಮಾತ್ರ ಅದು ಬಂಡವಾಳವಾಗುತ್ತದೆ. ಚಿನ್ನವು ತನಗೆ ತಾನೇ ಹೇಗೆ ನಾಣ್ಯವಾಗುವುದಿಲ್ಲವೋ ಅಥವಾ ಸಕ್ಕರೆಯು ಹೇಗೆ ಸಕ್ಕರೆಯ ಬೆಲೆಯಾಗುವುದಿಲ್ಲವೋ ಹಾಗೆಯೇ ಈ ನಿರ್ದಿಷ್ಟ ಸಂಬಂಧಗಳಿಂದ ಆ ಯಂತ್ರವನ್ನು ಬೇರ್ಪಡಿಸಿ ಬಿಟ್ಟರೆ ಅದು ಬಂಡವಾಳವಾಗಿ ಉಳಿಯುವುದಿಲ್ಲ.

ಉತ್ಪತ್ತಿಯ ಕ್ರಿಯೆಯಲ್ಲಿ, ಮನುಷ್ಯರು ಪ್ರಕೃತಿಯ ಮೇಲೆ ಕೆಲಸ ಮಾಡುವರು ಮಾತ್ರವಲ್ಲ ತಮ್ಮ ಜೊತೆಯಲ್ಲಿ ಕೆಲಸ ಮಾಡುವವರೊಂದಿಗೂ ಸಂಪರ್ಕ ಹೊಂದಿರುತ್ತಾರೆ. ಒಂದು ನಿರ್ದಿಷ್ಟ ರೀತಿಯಲ್ಲಿ ಸಹಕರಿಸುವುದರ ಮೂಲಕವೇ ಮತ್ತು ತಮ್ಮ ಚಟುವಟಿಕೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದರ ಮೂಲಕವೇ ಅವರು ಪದಾರ್ಥಗಳನ್ನು ಉತ್ಪತ್ತಿ ಮಾಡುತ್ತಾರೆ. ಉತ್ಪತ್ತಿ ಮಾಡುವುದಕ್ಕಾಗಿ ಪ್ರತಿಯೊಬ್ಬನೂ ಇತರರೊಡನೆ ನಿರ್ದಿಷ್ಟವಾದ ಸಂಬಂಧಗಳನ್ನು ಏರ್ಪಡಿಸಿ ಕೊಳ್ಳುತ್ತಾನೆ; ಈ ಸಾಮಾಜಿಕ ಸಂಬಂಧಗಳ ಚೌಕಟ್ಟಿನಲ್ಲಿ ಮಾತ್ರವೇ, ಪ್ರಕೃತಿಯ ಮೇಲಿನ ಅವರ ಕಾರ್ಯವು, ಅಂದರೆ ಉತ್ಪತ್ತಿಯು, ಜರುಗುವುದು.

ತಯಾರಿಸುವವರು ತಮ್ಮ ತಮ್ಮಲ್ಲೇ ಏರ್ಪಡಿಸಿಕೊಳ್ಳುವ ಈ ಸಾಮಾಜಿಕ ಸಂಬಂಧಗಳು, ಅವರು ತಮ್ಮ ಚಟುವಟಿಕೆಗಳನ್ನು ವಿನಿಮಯ ಮಾಡಿಕೊಂಡು ಉತ್ಪತ್ತಿಯ ಇಡೀ ಕ್ರಿಯೆಯಲ್ಲಿ ಭಾಗವಹಿಸುವ ಸ್ಥಿತಿಗತಿಗಳು. ಇವು ಉತ್ಪತ್ತಿ ಸಾಧನಗಳ ಸ್ವಭಾವಕ್ಕನುಗುಣವಾಗಿ ಸಹಜವಾಗಿಯೇ ಬೇರೆ ಬೇರೆಯಾಗಿರುವುವು. ಯುದ್ಧದ ಹೊಸ ಆಯುಧವಾದ ಬಂದೂಕವನ್ನು ಸೃಷ್ಟಿಸಿದ ಫಲವಾಗಿ, ಸೈನ್ಯದ ಇಡೀ ಒಳ ರಚನೆಯು ಬದಲಾವಣೆಯಾಗುವುದು ಅವಶ್ಯಕವಾಯಿತು; ಅನೇಕ ವ್ಯಕ್ತಿಗಳು ಒಂದುಗೂಡಿ ಸೈನ್ಯವಾಗಿ ವರ್ತಿಸಲು ಅವರ ಮಧ್ಯೆ ಇರಬೇಕಾದಂತಹ ಸಂಬಂಧಗಳು ಮಾರ್ಪಾಡಾದುವು. ಬೇರೆ ಬೇರೆ ಸೈನ್ಯಗಳ ನಡುವೆ ಇದ್ದ ಸಂಬಂಧಗಳೂ ಕೂಡ ಬದಲಾವಣೆ ಹೊಂದಿದುವು.

ಹೀಗೆ, ಉತ್ಪತ್ತಿಯ ಭೌತಿಕ ಸಾಧನಗಳು, ಅಂದರೆ ಉತ್ಪತ್ತಿ ಶಕ್ತಿಗಳು, ಬದಲಾವಣೆಯಾಗಿ ಬೆಳವಣಿಗೆ ಹೊಂದಿದ ಹಾಗೆಲ್ಲಾ, ಉತ್ಪತ್ತಿ ಮಾಡುವ ವ್ಯಕ್ತಿಗಳ ನಡುವೆ ಇರುವ ಸಾಮಾಜಿಕ ಸಂಬಂಧಗಳು, ಅಂದರೆ ಉತ್ಪತ್ತಿಯ ಸಾಮಾಜಿಕ ಸಂಬಂಧಗಳು, ಬದಲಾವಣೆಯಾಗುತ್ತವೆ, ಪರಿವರ್ತನೆ ಹೊಂದುತ್ತವೆ. ಉತ್ಪತ್ತಿಯ ಸಂಬಂಧಗಳೆಲ್ಲವೂ ಕೂಡಿ ಒಟ್ಟಿನಲ್ಲಿ ಸಾಮಾಜಿಕ ಸಂಬಂಧಗಳಾಗುತ್ತವೆ; ಅದನ್ನೇ ಸಮಾಜ ಎನ್ನುವುದು. ಸುಮ್ಮನೆ ಸಮಾಜ ಎಂದರೆ ಸಾಲದು. ಚಾರಿತ್ರಿಕ ಬೆಳವಣಿಗೆಯ ನಿರ್ದಿಷ್ಟ ಘಟ್ಟವೊಂದರಲ್ಲಿ ಇರುವಂತಹ, ತನ್ನದೇ ಆದ ವಿಶಿಷ್ಟವಾದ ಸ್ವಭಾವವನ್ನು ಹೊಂದಿರುವಂತಹ ಸಮಾಜ ಎಂದು ಹೇಳಬೇಕು. ಪುರಾತನ ಸಮಾಜ (ಗುಲಾಮಗಿರಿ), ಫ್ಯೂಡಲ್ ಸಮಾಜ (ಜಮೀನುದಾಸ್ಯ ಪದ್ಧತಿ) ಬೂರ್ಜ್ವಾ ಸಮಾಜ (ಬಂಡವಾಳಗಾರ ಪದ್ಧತಿ) ಇವುಗಳೆಲ್ಲವೂ ಉತ್ಪತ್ತಿ ಸಂಬಂಧಗಳ ಅಂತಹ ಮೊತ್ತಗಳಾಗಿವೆ; ಆದರೆ ಅವುಗಳಲ್ಲಿ ಒಂದೊಂದೂ ಮಾನವ ಚರಿತ್ರೆಯಲ್ಲಿ ಬೆಳವಣಿಗೆಯ ಒಂದು ವಿಶೇಷ ಘಟ್ಟವನ್ನು ಗುರ್ತಿಸುತ್ತವೆ.

ಬಂಡವಾಳವೂ ಕೂಡ ಉತ್ಪತ್ತಿಯ ಸಾಮಾಜಿಕ ಸಂಬಂಧವಾಗಿದೆ. ಅದು ಬೂರ್ಜ್ವಾ ಉತ್ಪತ್ತಿ ಸಂಬಂಧ, ಅಂದರೆ ಬೂರ್ಜ್ವಾ (ಬಂಡವಾಳಗಾರ) ಸಮಾಜದಲ್ಲಿನ ಉತ್ಪತ್ತಿ ಸಂಬಂಧವಾಗಿದೆ. ಬಂಡವಾಳದ ಬೇರೆ ಬೇರೆ ಭಾಗಗಳಾದ ಜೀವನಕ್ಕೆ ಅಗತ್ಯವಾದ ಪದಾರ್ಥಗಳು, ಕೆಲಸದ ಸಲಕರಣೆಗಳು, ಕಚ್ಚಾ ಪದಾರ್ಥಗಳು, ಇವೆಲ್ಲವೂ ನಿರ್ದಿಷ್ಟವಾದ ಸಾಮಾಜಿಕ ಸ್ಥಿತಿಗತಿಗಳಲ್ಲಿ, ನಿರ್ದಿಷ್ಟ

ವಾದ ಸಾಮಾಜಿಕ ಸಂಬಂಧಗಳ ಚೌಕಟ್ಟಿನಲ್ಲಿ ಉತ್ಪತ್ತಿ ಮಾಡಲ್ಪಟ್ಟು ಶೇಖರವಾಗುವುದಿಲ್ಲವೇ? ಹೊಸ ಉತ್ಪತ್ತಿಗಾಗಿ ಅವನ್ನು ನಿರ್ದಿಷ್ಟ ಸಾಮಾಜಿಕ ಸ್ಥಿತಿಗತಿಗಳಲ್ಲಿ, ನಿರ್ದಿಷ್ಟ ಸಾಮಾಜಿಕ ಸಂಬಂಧಗಳ ಚೌಕಟ್ಟಿನಲ್ಲಿ ಉಪಯೋಗಿಸುವುದಿಲ್ಲವೇ? ಹೊಸ ಉತ್ಪತ್ತಿಗೆ ನೆರವಾಗುವ ಹಳೆಯ ಪದಾರ್ಥಗಳನ್ನು ಬಂಡವಾಳವನ್ನಾಗಿ ಮಾಡುವುದು ಈ ನಿರ್ದಿಷ್ಟ ಸಾಮಾಜಿಕ ಲಕ್ಷಣವೇ ಅಲ್ಲವೇ?

ಬಂಡವಾಳ ಎನ್ನುವುದು ಜೀವನಕ್ಕೆ ಅಗತ್ಯವಾದ ಪದಾರ್ಥಗಳು, ಕೆಲಸದ ಸಲಕರಣೆಗಳು ಮತ್ತು ಕಚ್ಚಾ ಪದಾರ್ಥಗಳು ಇವುಗಳಷ್ಟೇ ಅಲ್ಲ, ಅಂದರೆ ಭೌತಿಕ ಪದಾರ್ಥಗಳು ಮಾತ್ರವೇ ಅಲ್ಲ; ಅದು ಅಷ್ಟರ ಮಟ್ಟಿಗೇ ವಿನಿಮಯ ಮೌಲ್ಯಗಳಿಂದಲೂ ಕೂಡಿದೆ. ಬಂಡವಾಳವಾಗಿರುವ ಪದಾರ್ಥಗಳು ಮಾರಾಟದ ಪದಾರ್ಥಗಳಾಗಿವೆ. ಆದುದರಿಂದ ಬಂಡವಾಳವು ಭೌತಿಕ ಪದಾರ್ಥಗಳ ಸಂಗ್ರಹ ಮಾತ್ರವೇ ಅಲ್ಲ, ಅದು ಮಾರಾಟದ ಪದಾರ್ಥಗಳ, ವಿನಿಮಯ ಮೌಲ್ಯಗಳ, ಸಾಮಾಜಿಕ ಪರಿಮಾಣಗಳ, ಸಂಗ್ರಹವಾಗಿದೆ.

ಉಣ್ಣೆಗೆ ಬದಲಾಗಿ ಹತ್ತಿಯನ್ನು ತೆಗೆದುಕೊಂಡರೂ; ಗೋಧಿಗೆ ಬದಲಾಗಿ ಅಕ್ಕಿಯನ್ನು ತೆಗೆದುಕೊಂಡರೂ, ಅಥವಾ ರೈಲುಗಾಡಿಗಳ ಬದಲಾಗಿ ಹಡಗುಗಳನ್ನು ತೆಗೆದುಕೊಂಡರೂ, ಕೂಡ, ಬಂಡವಾಳದ ರೂಪಗಳಾದ ಹತ್ತಿ, ಅಕ್ಕಿ ಮತ್ತು ಹಡಗು ಇವುಗಳ ವಿನಿಮಯ ಮೌಲ್ಯವು, ಬೆಲೆಯು, ಮೊದಲಿದ್ದ ಉಣ್ಣೆ, ಗೋಧಿ ಮತ್ತು ರೈಲುಗಾಡಿಗಳ ವಿನಿಮಯ ಮೌಲ್ಯಕ್ಕೆ, ಬೆಲೆಗೆ, ಸರಿಸಮಾನವಾಗಿದ್ದ ಪಕ್ಷದಲ್ಲಿ, ಬಂಡವಾಳವು ಮೊದಲಿನಷ್ಟೇ ಇರುತ್ತದೆ. ಆದುದರಿಂದ ಬಂಡವಾಳವು ಸ್ವಲ್ಪವೂ ಕೂಡ ಹೆಚ್ಚು ಕಮ್ಮಿಯಾಗದೆ ಬಂಡವಾಳದ ರೂಪವು ಸತತವಾಗಿ ಬದಲಾಯಿಸುತ್ತಿರಬಹುದು.

ಆದರೆ ಎಲ್ಲಾ ಬಂಡವಾಳವೂ, ಪದಾರ್ಥಗಳ, ವಿನಿಮಯ ಮೌಲ್ಯಗಳ, ಒಂದು ಸಂಗ್ರಹವಾದರೂ, ಪದಾರ್ಥಗಳ, ವಿನಿಮಯ ಮೌಲ್ಯಗಳ ಪ್ರತಿಯೊಂದು ಸಂಗ್ರಹವೂ ಅಷ್ಟಕ್ಕೇ ಬಂಡವಾಳವಾಗುವುದಿಲ್ಲ.

ವಿನಿಮಯ ಮೌಲ್ಯಗಳ ಪ್ರತಿಯೊಂದು ಸಂಗ್ರಹವೂ ವಿನಿಮಯ ಮೌಲ್ಯ ಮಾತ್ರವಾಗಿರುತ್ತದೆ ಅಷ್ಟೆ. ಪ್ರತಿಯೊಂದು ಪ್ರತ್ಯೇಕ ವಿನಿಮಯ ಮೌಲ್ಯವೂ ಅನೇಕ ವಿನಿಮಯ ಮೌಲ್ಯಗಳ ಒಂದು ಸಂಗ್ರಹವಾಗಿರುತ್ತದೆ ಉದಾಹರಣೆಗೆ.

ಸಾವಿರ ಮಾರ್ಕುಗಳ ಬೆಲೆಬಾಳುವ ಒಂದು ಮನೆಯು ಸಾವಿರ ಮಾರ್ಕುಗಳ ವಿನಿಮಯ ಮೌಲ್ಯವಾಗಿರುತ್ತದೆ. ಒಂದು ಪೆನ್ನಿ ಬೆಲೆಯುಳ್ಳ ಒಂದು ಕಾಗದವು ಪೆನ್ನಿಯ ನೂರರಲ್ಲಿ ಒಂದು ಭಾಗದ ನೂರು ವಿನಿಮಯ ಮೌಲ್ಯಗಳ ಸಂಗ್ರಹವಾಗಿರುತ್ತದೆ. ಇತರ ಪದಾರ್ಥಗಳಿಗೆ ಬದಲಾಗಿ ವಿನಿಮಯ ಮಾಡಬಹುದಾದ ಪದಾರ್ಥಗಳು ಮಾರಾಟದ ಪದಾರ್ಥಗಳಾಗುತ್ತವೆ. ಯಾವ ನಿರ್ದಿಷ್ಟ ಪ್ರಮಾಣದಲ್ಲಿ ಅವುಗಳನ್ನು ವಿನಿಮಯ ಮಾಡಬಹುದೋ ಆ ಪ್ರಮಾಣವನ್ನು ಅವುಗಳ ವಿನಿಮಯ ಮೌಲ್ಯ ಎನ್ನುತ್ತೇವೆ ಅಥವಾ ಹಣದ ರೂಪದಲ್ಲಿ ವ್ಯಕ್ತಪಡಿಸಿದರೆ, ಅವುಗಳ ಬೆಲೆ ಎನ್ನುತ್ತೇವೆ. ಈ ಪದಾರ್ಥಗಳ ಪರಿಮಾಣದಲ್ಲಿ ಹೆಚ್ಚು ಕಮ್ಮಿಯಾದ ಮಾತ್ರಕ್ಕೆ, ಅವುಗಳು ಮಾರಾಟದ ಪದಾರ್ಥಗಳ ಗುಣವನ್ನು ಕಳೆದು ಕೊಳ್ಳುವುದಿಲ್ಲ, ಅವುಗಳಲ್ಲಿ ವಿನಿಮಯ ಮೌಲ್ಯವಿರುವುದಾಗಲೀ, ಅಥವಾ ಅವುಗಳಗೆ ನಿರ್ದಿಷ್ಟವಾದ ಬೆಲೆಯಿರುವುದಾಗಲೀ, ತಪ್ಪಿ ಹೋಗುವುದಿಲ್ಲ. ಒಂದು ಮರವು ದೊಡ್ಡದಾಗಿರಲಿ ಅಥವಾ ಸಣ್ಣದಾಗಿರಲಿ ಅದು ಮರವಾಗಿಯೇ ಇರುತ್ತದೆ. ಇತರ ಪದಾರ್ಥಗಳಿಗೆ ಬದಲಾಗಿ ಕಬ್ಬಿಣವನ್ನು ಔನ್ಸುಗಟ್ಟಲೆಯಲ್ಲಿ ವಿನಿಮಯ ಮಾಡಿದರೂ, ಇದರಿಂದ ಕಬ್ಬಿಣ ಪಡೆದಿರುವ ಮಾರಾಟದ ಪದಾರ್ಥದ ಗುಣದಲ್ಲಿಯಾಗಲೀ ಅಥವಾ ವಿನಿಮಯ ಮೌಲ್ಯದ ಗುಣದಲ್ಲಿಯಾಗಲೀ ಯಾವ ವ್ಯತ್ಯಾಸವಾದರೂ ಆಗುತ್ತದೆಯೇ? ಅವರ ಪರಿಮಾಣಕ್ಕೆ ತಕ್ಕಂತೆ, ಅದು ಹೆಚ್ಚಿನ ಅಥವಾ ಕಮ್ಮಿ ಮೌಲ್ಯದ, ಹೆಚ್ಚಿನ ಅಥವಾ ಕಮ್ಮಿ ಬೆಲೆಯ ಮಾರಾಟ ಪದಾರ್ಥವಾಗಿರುವುದು.

ಹಾಗಾದರೆ ಮಾರಾಟದ ಪದಾರ್ಥಗಳು ವಿನಿಮಯ ಮೌಲ್ಯಗಳ, ಒಂದು ಸಂಗ್ರಹವು ಯಾವ ರೀತಿಯಲ್ಲಿ ಬಂಡವಾಳವಾಗುತ್ತದೆ?

ನೇರವಾದ, ಜೀವಂತ ದುಡಿಯುವ ಶಕ್ತಿಯೊಂದಿಗೆ ವಿನಿಮಯ ಮಾಡಿಕೊಳ್ಳುವುದರ ಮೂಲಕ, ಸ್ವತಂತ್ರವಾದ ಸಾಮಾಜಿಕ ಶಕ್ತಿಯಾಗಿ, ಅಂದರೆ ಸಮಾಜದ ಒಂದು ಭಾಗದ ಶಕ್ತಿಯಾಗಿ, ಉಳಿದುಕೊಂಡು ವೃದ್ಧಿಗೊಳ್ಳುವುದರಿಂದ ಮಾರಾಟದ ಪದಾರ್ಥಗಳ ಒಂದು ಸಂಗ್ರಹವು ಬಂಡವಾಳವಾಗುತ್ತದೆ. ಬಂಡವಾಳ ತಲೆ ಎತ್ತಲು, ಅದಕ್ಕೆ ಪೂರ್ವಭಾವಿಯಾಗಿ, ಕೇವಲ ದುಡಿಯುವ ಸಾಮರ್ಥ್ಯವನ್ನು ಬಿಟ್ಟು ಬೇರೆ ಯಾವುದನ್ನೂ ಪಡೆದಿರದ ಒಂದು ವರ್ಗವು ಇರುವುದು ಅವಶ್ಯಕ.

ನೇರವಾದ, ಜೀವಂತ ದುಡಿಯುವ ಶಕ್ತಿಯ ಮೇಲೆ ವಸ್ತು ರೂಪದಲ್ಲಿ ಶೇಖರವಾಗಿರುವ ಹಿಂದಿನ ಕೆಲಸವು ನಡೆಸುವ ದಬ್ಬಾಳಿಕೆಯೇ, ಶೇಖರವಾಗಿರುವ ಕೆಲಸವನ್ನು ಬಂಡವಾಳವನ್ನಾಗಿ ಪರಿವರ್ತಿಸುವುದು.

ಶೇಖರವಾಗಿರುವ ಕೆಲಸವು ಹೊಸ ಉತ್ಪತ್ತಿಯ ಸಾಧನವಾಗಿ ಜೀವಂತ ದುಡಿಯುವ ಶಕ್ತಿಗೆ ಸೇವೆ ಸಲ್ಲಿಸಿದರೆ ಅದು ಬಂಡವಾಳವಾಗುವುದಿಲ್ಲ. ಶೇಖರವಾಗಿರುವ ಕೆಲಸದ ವಿನಿಮಯ ಮೌಲ್ಯವನ್ನು ಉಳಿಸಿ ವೃದ್ಧಿಗೊಳಿಸುವ ಸಾಧನವಾಗಿ ಜೀವಂತ ದುಡಿಯುವ ಶಕ್ತಿಯು ಶೇಖರವಾಗಿರುವ ಕೆಲಸಕ್ಕೆ ಸೇವೆಸಲ್ಲಿಸಿದರೆ, ಶೇಖರವಾಗಿರುವ ಕೆಲಸವು ಆಗ ಬಂಡವಾಳವಾಗುವುದು.

ಬಂಡವಾಳಗಾರ ಮತ್ತು ಕೂಲಿ ಕೆಲಸಗಾರ ಇವರುಗಳ ನಡುವೆ ನಡೆಯುವ ವಿನಿಮಯದಲ್ಲಿ ಏನಾಗುತ್ತದೆ?

ತನ್ನ ದುಡಿಯುವ ಶಕ್ತಿಗೆ ವಿನಿಮಯವಾಗಿ ಕೆಲಸಗಾರನು ಬದುಕಿಗೆ ಬೇಕಾದ ಪದಾರ್ಥಗಳನ್ನು ಪಡೆಯುತ್ತಾನೆ. ಆದರೆ ತಾನು ಕೊಡುವ ಬದುಕಿಗೆ ಬೇಕಾದ ಪದಾರ್ಥಗಳಿಗೆ ವಿನಿಮಯವಾಗಿ ಬಂಡವಾಳಗಾರನು ಕೆಲಸಗಾರನ ಉತ್ಪತ್ತಿ ಕ್ರಿಯೆಯನ್ನು ಪಡೆಯುತ್ತಾನೆ. ಕೆಲಸಗಾರನ ಈ ಸೃಷ್ಟಿಶಕ್ತಿಯು ಅವನು ಬಳಸುವುದನ್ನು ಬರ್ತಿ ಮಾಡುವುದಲ್ಲದೆ, ಶೇಖರವಾಗಿರುವ ಕೆಲಸಕ್ಕೆ ಅದು ಮೊದಲು ಹೊಂದಿದ್ದ ಮೌಲ್ಯಕ್ಕಿಂತ ಹೆಚ್ಚಾದ ಮೌಲ್ಯವನ್ನು ಕೊಡುತ್ತದೆ. ಬಂಡವಾಳಗಾರನ ಬಳಿ ಇರುವ ಬದುಕಿಗೆ ಬೇಕಾದ ಪದಾರ್ಥಗಳ ಒಂದು ಭಾಗವನ್ನು ಕೆಲಸಗಾರನು ಪಡೆಯುತ್ತಾನೆ. ಬದುಕಿಗೆ ಬೇಕಾದ ಈ ಪದಾರ್ಥಗಳನ್ನು ಅವನು ಏನು ಮಾಡುತ್ತಾನೆ? ತಕ್ಷಣವೇ ಅನುಭವಿಸಿಬಿಡುತ್ತಾನೆ. ಆದರೆ ಬದುಕಿಗೆ ಬೇಕಾದ ಪದಾರ್ಥಗಳನ್ನು ಬಳಸಿದ ತಕ್ಷಣವೇ ಅವುಗಳು ಪುನಃ ಕೈಗೆ ಸಿಕ್ಕದಂತೆ ಹೋದಂತೆಯೇ ಸರಿ. ಹೀಗಾಗದಿರಬೇಕಾದರೆ ಅವುಗಳ ಉಪಯೋಗದಿಂದ ಬದುಕಿರುವ ಕಾಲದಲ್ಲಿ ಬದುಕಿಗೆ ಬೇಕಾದ ಹೊಸ ಪದಾರ್ಥಗಳನ್ನು ಉತ್ಪತ್ತಿ ಮಾಡಬೇಕು; ಅವುಗಳ ಉಪಯೋಗದಿಂದ ನಾಶವಾಗುವ ಮೌಲ್ಯಗಳ ಸ್ಥಾನದಲ್ಲಿ ಹೊಸ ಮೌಲ್ಯಗಳನ್ನು ತನ್ನ ಕೆಲಸದ ಮೂಲಕ ಸೃಷ್ಟಿಸಲು ಕೆಲಸಗಾರನು ಆ ಪದಾರ್ಥಗಳನ್ನು ಅನುಭವಿಸುತ್ತಿರುವ ಕಾಲವನ್ನೇ ವಿನಿಯೋಗಿಸಬೇಕು. ಆದರೆ ತನ್ನಲ್ಲಿರುವ ಈ ಒಂದು ಘನವಾದ ಪುನರುತ್ಪನ್ನ ಶಕ್ತಿಯನ್ನು ತಾನು ಅನುಭವಿಸುತ್ತಿರುವ ಬದುಕಿಗೆ ಬೇ

ಕಾದ ಪದಾರ್ಥಗಳಿಗೆ ವಿನಿಮಯವಾಗಿ ಕೆಲಸಗಾರನು ಬಂಡವಾಳಗಾರನಿಗೆ ಆಗಲೇ ಅರ್ಪಿಸಿಬಿಟ್ಟಿದ್ದಾನೆ. ಆದುದರಿಂದ ಆ ಶಕ್ತಿಯು ಅವನ ಪಾಲಿಗೆ ಇಲ್ಲವಾಗಿದೆ.

ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ: ಒಬ್ಬ ಗೇಣಿ ಬೇಸಾಯಗಾರನು ತನ್ನ ಕೂಲಿ ಆಳಿಗೆ ದಿನಕ್ಕೆ ಐದು ಬೆಳ್ಳಿ ಗ್ರೋಷೆನ್ನುಗಳನ್ನು (ನಾಣ್ಯಗಳನ್ನು) ಕೊಡುತ್ತಾನೆ. ಈ ಐದು ಬೆಳ್ಳಿ ಗ್ರೋಷೆನ್ನುಗಳಿಗೆ ಕೂಲಿ ಆಳು ದಿನವೆಲ್ಲಾ ಬೇಸಾಯಗಾರನ ಜಮೀನಿನಲ್ಲಿ ಕೆಲಸ ಮಾಡಿ ಅವನಿಗೆ ಹತ್ತು ಬೆಳ್ಳಿ ಗ್ರೋಷೆನ್ನುಗಳ ಪ್ರತಿಫಲವನ್ನು ಉಂಟುಮಾಡಿಕೊಡುತ್ತಾನೆ. ಬೇಸಾಯಗಾರನು ಕೂಲಿ ಆಳಿಗೆ ಕೊಡಬೇಕಾಗಿರುವ ಮೌಲ್ಯವು ವಾಪಸ್ಸು ಬರುವುದಲ್ಲದೆ, ಅದರ ಎರಡರಷ್ಟು ಮೌಲ್ಯ ಅವನಿಗೆ ಸಿಕ್ಕುತ್ತದೆ. ಆದುದರಿಂದ ತಾನು ಕೂಲಿ ಆಳಿಗೆ ಕೊಟ್ಟ ಐದು ಬೆಳ್ಳಿ ಗ್ರೋಷೆನ್ನುಗಳನ್ನು ಬೇಸಾಯಗಾರನು ಫಲಪ್ರದವಾದ ರೀತಿಯಲ್ಲಿ, ಉತ್ಪತ್ತಿದಾಯಕವಾದ ರೀತಿಯಲ್ಲಿ ಉಪಯೋಗಿಸಿದ್ದಾನೆ, ಬಳಸಿದ್ದಾನೆ. ಐದು ಬೆಳ್ಳಿ ಗ್ರೋಷೆನ್ನುಗಳ ಸಹಾಯದಿಂದ ಅದರ ಎರಡರಷ್ಟು ಮೌಲ್ಯ ಉಳ್ಳಂತಹ ವ್ಯವಸಾಯ ಪದಾರ್ಥವನ್ನು ಉತ್ಪತ್ತಿ ಮಾಡುವಂತಹ ಕೆಲಸಗಾರನ ಶಕ್ತಿಯನ್ನು ಕೊಂಡುಕೊಂಡಿದ್ದಾನೆ. ಈ ರೀತಿ ಐದು ಬೆಳ್ಳಿ ಗ್ರೋಷೆನ್ನುಗಳಿಂದ ಹತ್ತು ಬೆಳ್ಳಿ ಗ್ರೋಷೆನ್ನುಗಳನ್ನು ಪಡೆದಿದ್ದಾನೆ. ಆದರೆ ಕೂಲಿ ಆಳಾದರೋ ತನ್ನ ಉತ್ಪತ್ತಿದಾಯಕ ಶಕ್ತಿಯ ಉಪಯೋಗವನ್ನು ಬೇಸಾಯಗಾರನಿಗೆ ಮಾರಿಬಿಟ್ಟು ಅದಕ್ಕೆ ಬದಲಾಗಿ ಐದು ಬೆಳ್ಳಿ ಗ್ರೋಷೆನ್ನುಗಳನ್ನು ಪಡೆದಿದ್ದಾನೆ. ಈ ಹಣದಿಂದ ಬದುಕಿಗೆ ಬೇಕಾದ ಪದಾರ್ಥಗಳನ್ನು ಕೊಂಡುಕೊಂಡು ಹೆಚ್ಚುಕಮ್ಮಿ ಶೀಘ್ರವಾಗಿಯೇ ಅವುಗಳನ್ನು ಅನಭವಿಸಿಬಿಡುತ್ತಾನೆ. ಆದುದರಿಂದ ಆ ಐದು ಬೆಳ್ಳಿ ಗ್ರೋಷೆನ್ನುಗಳು ಎರಡು ಬಗೆಯಲ್ಲಿ ಬಳಸಲ್ಪಟ್ಟವೆ. ಬಂಡವಾಳವಾಗಿ ಪುನರುತ್ಪತ್ತಿದಾಯಕವಾಗಿ ಬಳಸಲ್ಪಟ್ಟಿದೆ; ಏಕೆಂದರೆ ಹತ್ತು ಬೆಳ್ಳಿ ಗ್ರೋಷೆನ್ನುಗಳನ್ನು ಉತ್ಪತ್ತಿಮಾಡಿದ ದುಡಿಯುವ ಶಕ್ತಿಗೆ ಅವುಗಳನ್ನು ವಿನಿಮಯ ಮಾಡಲಾಯಿತು. ಅದೇ ಐದು ಬೆಳ್ಳಿ ಗ್ರೋಷೆನ್ನುಗಳು ಕೆಲಸಗಾರನಿಂದ ಉತ್ಪತ್ತಿಯಿಲ್ಲದ ರೀತಿಯಲ್ಲಿ ಬಳಸಲ್ಪಟ್ಟವು; ಏಕೆಂದರೆ ಬದುಕಿಗೆ ಬೇಕಾದ ಪದಾರ್ಥಗಳಿಗೆ ಅವುಗಳನ್ನು ಕೆಲಸಗಾರನು ವಿನಿಮಯ ಮಾಡಿಕೊಂಡು ಅನುಭವಿಸಿ ಬಿಟ್ಟಿದ್ದಾನೆ. ಅವು ಮಾಯವಾದಂತೆಯೇ ಸರಿ. ಅವುಗಳ ಮೌಲ್ಯವನ್ನು ಕೆಲಸಗಾರನು ಮತ್ತೆ ಪಡೆಯಬೇಕಾದರೆ ಇರುವ ಮಾರ್ಗ ಒಂದೇ:

ಜೀಸಾಯುಗಾರನೊಂದಿಗೆ ಮೊದಲಿನಂತೆಯೇ ತನ್ನ ದುಡಿಯುವ ಶಕ್ತಿಯನ್ನು ವಿನಿಮಯ ಮಾಡಿಕೊಳ್ಳುವುದು. ಈ ರೀತಿಯಲ್ಲಿ ಕೂಲಿ ಕೆಲಸವಿಲ್ಲದಿದ್ದರೆ ಬಂಡವಾಳ ಇರುವಂತಿಲ್ಲ; ಇವೆರಡೂ ಪರಸ್ಪರ ಒಂದು ಇನ್ನೊಂದರ ಅಸ್ತಿತ್ವಕ್ಕೆ ಅಗತ್ಯವಾಗಿರುತ್ತದೆ; ಒಂದು ಇನ್ನೊಂದನ್ನು ಉಂಟುಮಾಡುತ್ತದೆ.

ಹತ್ತಿಯ ಗಿರಣಿಯಲ್ಲಿ ಕೆಲಸ ಮಾಡುವ ಕೆಲಸಗಾರನು ಹತ್ತಿಯ ಜವಳಿಯನ್ನು ಮಾತ್ರವೇ ಉತ್ಪತ್ತಿ ಮಾಡುತ್ತಾನೇನು? ಇಲ್ಲ, ಅವನು ಬಂಡವಾಳವನ್ನೂ ಉತ್ಪತ್ತಿ ಮಾಡುತ್ತಾನೆ. ಅವನು ಉತ್ಪತ್ತಿ ಮಾಡುವ ಮೌಲ್ಯಗಳು ಅವನ ಕೆಲಸವನ್ನು ಮತ್ತೊಮ್ಮೆ ಪಡೆದುಕೊಂಡು ಆದರ ಮೂಲಕ ಹೊಸ ಮೌಲ್ಯಗಳನ್ನು ಸೃಷ್ಟಿಸಲು ಬಂಡವಾಳಗಾರನಿಗೆ ನೆರವಾಗುತ್ತವೆ.

ದುಡಿಯುವ ಶಕ್ತಿಗೆ ತನ್ನನ್ನು ವಿನಿಮಯ ಮಾಡಿಕೊಳ್ಳುವುದರಿಂದ ಮಾತ್ರ, ಕೂಲಿಕೆಲಸವನ್ನು ಚೇತನಗೊಳಿಸುವುದರಿಂದ ಮಾತ್ರ, ಬಂಡವಾಳವು ಅಧಿಕವಾಗಬಲ್ಲದು. ಬಂಡವಾಳವನ್ನು ಅಧಿಕಗೊಳಿಸುವುದರ ಮೂಲಕ ಮಾತ್ರವೇ ಕೂಲಿ ಕೆಲಸಗಾರನ ದುಡಿಯುವ ಶಕ್ತಿಯು ಬಂಡವಾಳಕ್ಕೆ ಪ್ರತಿಯಾಗಿ ವಿನಿಮಯವಾಗಬಲ್ಲದು; ಹೀಗೆ ತಾನು ಯಾವ ಬಲಕ್ಕೆ ಗುಲಾಮನಾಗಿದೆಯೋ ಆ ಬಲವನ್ನೇ (ಬಂಡವಾಳವನ್ನೇ) ಕೆಲಸಗಾರನ ದುಡಿಯುವ ಶಕ್ತಿಯು ಬಲಪಡಿಸುತ್ತದೆ. ಆದುದರಿಂದ ಬಂಡವಾಳ ಅಧಿಕವಾದರೆ ಶ್ರಮಜೀವಿಗಳು ಅಧಿಕವಾಗುತ್ತಾರೆ; ಕೂಲಿಗಾರರ ವರ್ಗವು ಅಧಿಕವಾಗುತ್ತದೆ.

ಆದುದರಿಂದ ಬಂಡವಾಳಗಾರನ ಮತ್ತು ಕೆಲಸಗಾರನ ಹಿತಗಳು ಒಂದೇ ಎಂದು ಬೂರ್ಜ್ವಾಗಳೂ (ಬಂಡವಾಳಗಾರರೂ) ಮತ್ತು ಅವರ ಅರ್ಥಶಾಸ್ತ್ರಜ್ಞರೂ ವಾದಿಸುತ್ತಾರೆ. ಅಲ್ಲವೇ ಮತ್ತೆ! ಬಂಡವಾಳವು ಅವನಿಗೆ ಕೆಲಸವನ್ನು ಕೊಡದಿದ್ದರೆ ಕೆಲಸಗಾರನು ಸಾಯುತ್ತಾನೆ. ದುಡಿಯುವ ಶಕ್ತಿಯನ್ನು ಶೋಷಿಸದಿದ್ದರೆ ಬಂಡವಾಳವು ಹಾಳಾಗುತ್ತದೆ; ದುಡಿಯುವ ಶಕ್ತಿಯನ್ನು ಶೋಷಿಸಲು ಬಂಡವಾಳವು ಅದನ್ನು ಕೊಳ್ಳಲೇಬೇಕು. ಉತ್ಪತ್ತಿಗಾಗಿ ಉಪಯೋಗಿಸಲ್ಪಡುವಂತಹ ಬಂಡವಾಳವು, ಅಂದರೆ ಉತ್ಪತ್ತಿದಾಯಕವಾದ ಬಂಡವಾಳವು ವೇಗವಾಗಿ ಅಧಿಕವಾದಷ್ಟೂ, ಕೈಗಾರಿಕೆಯು ಅಭಿವೃದ್ಧಿ ಹೊಂದಿದಷ್ಟೂ, ಬಂಡವಾಳಗಾರರು ತಮ್ಮ ಐಶ್ವರ್ಯವನ್ನು ಹೆಚ್ಚಿಸಿಕೊಂಡಷ್ಟೂ ಮತ್ತು ವ್ಯಾಪಾರ ಚನ್ನಾಗಿ ನಡೆದಷ್ಟೂ ಬಂಡ

ವಾಳಗಾರನಿಗೆ ಹೆಚ್ಚು ಹೆಚ್ಚು ಮಂದಿ ಕೆಲಸಗಾರರು ಬೇಕಾಗುತ್ತಾರೆ, ಕೆಲಸಗಾರನೂ ಕೂಡ ತನ್ನ ದುಡಿಯುವ ಶಕ್ತಿಗೆ ಹೆಚ್ಚು ಬೆಲೆಯನ್ನು ಕೇಳುತ್ತಾನೆ.

ಆದುದರಿಂದ, ಕೆಲಸಗಾರನ ಪರಿಸ್ಥಿತಿ ತಕ್ಕಮಟ್ಟಿಗಾದರೂ ಇರುವುದಕ್ಕೆ ಉತ್ಪತ್ತಿದಾಯಕವಾದ ಬಂಡವಾಳವು ಆದಷ್ಟು ವೇಗವಾಗಿ ಬೆಳೆಯುವುದು ಅವಶ್ಯಕವಾಗಿದೆ.

ಆದರೆ ಉತ್ಪತ್ತಿದಾಯಕವಾದ ಬಂಡವಾಳವು ಬೆಳೆಯುವುದೆಂದರೇನು? ಜೀವಂತ ಕೆಲಸದ ಮೇಲೆ ಶೇಖರವಾಗಿರುವ ಕೆಲಸವು ಹೊಂದಿರುವ ಅಧಿಕಾರದ ಬೆಳವಣಿಗೆ. ಕಾರ್ಮಿಕ ವರ್ಗದ ಮೇಲೆ ಬಂಡವಾಳಗಾರ ವರ್ಗದ ದಬ್ಬಾಳಿಕೆಯ ಬೆಳವಣಿಗೆ. ತನ್ನನ್ನು ಆಳುವಂತಹ ಇತರರ ಸಂಪತ್ತನ್ನು, ತನ್ನ ವೈರಿಯಾಗಿರುವ ಶಕ್ತಿಯನ್ನು, ಅಂದರೆ ಬಂಡವಾಳವನ್ನು, ಕೂಲಿ ಕೆಲಸವು ಉತ್ಪತ್ತಿ ಮಾಡಿದರೆ ಮಾತ್ರ, ಕೆಲಸದ ಸಾಧನಗಳನ್ನು, ಬದುಕಿಗೆ ಬೇಕಾಗುವ ಪದಾರ್ಥಗಳನ್ನು, ಈ ವೈರಿ ಶಕ್ತಿಯು (ಬಂಡವಾಳವು) ಕೆಲಸಗಾರನಿಗೆ ಕೊಡುತ್ತದೆ. ಆದರೆ ಇದರಲ್ಲಿ ಒಂದು ಷರತ್ತುಂಟು. ಅದೇನೆಂದರೆ ಕೊಳ್ಳಲ್ಪಟ್ಟ ಕೂಲಿಕೆಲಸವು ಮತ್ತೊಮ್ಮೆ ಬಂಡವಾಳದ ಒಂದು ಭಾಗವಾಗಬೇಕು, ಬಂಡವಾಳವು ಇನ್ನೂ ವೇಗವಾಗಿ ಬೆಳೆಯುವುದಕ್ಕೆ ನೆರವಾಗಬೇಕು.

ಬಂಡವಾಳದ ಮತ್ತು ಕೆಲಸಗಾರರ ಹಿತಗಳು ಬೇರೆ ಬೇರೆಯಲ್ಲ, ಒಂದೇ ಎಂದು ಹೇಳುವುದರಲ್ಲಿರುವ ಸತ್ಯ ಇಷ್ಟೆ: ಬಂಡವಾಳವೂ ಮತ್ತು ಕೂಲಿ ಕೆಲಸವೂ ಒಂದೇ ಸಂಬಂಧದ ಎರಡು ಮುಖಗಳೆಂಬ ಅಂಶ. ಸಾಲ ಕೊಡುವವನೂ ಮತ್ತು ದುಂದುವೆಚ್ಚ ಮಾಡುವವನೂ ಹೇಗೆ ಒಬ್ಬರು ಮತ್ತೊಬ್ಬರ ಇರುವಿಕೆಗೆ ಆಧಾರವಾಗಿರುತ್ತಾರೋ ಹಾಗೆಯೇ, ಬಂಡವಾಳ ಮತ್ತು ಕೂಲಿ ಕೆಲಸ, ಇವುಗಳೂ ಕೂಡ ಒಂದು ಇನ್ನೊಂದನ್ನು ನಿರ್ಧರಿಸುತ್ತದೆ.

ಕೆಲಸಗಾರನ ಮತ್ತು ಬಂಡವಾಳಗಾರನ ಹಿತಗಳ ಸಾಮ್ಯದ ಬಗ್ಗೆ ಅತಿಯಾಗಿ ಮಾತನಾಡುತ್ತಾರೆ. ಆದರೆ ಈ ಸಾಮ್ಯವಾದರೂ ಎಂತಹುದು? ಕೂಲಿ ಕೆಲಸಗಾರನು ಕೂಲಿ ಕೆಲಸಗಾರನಾಗಿಯೇ ಉಳಿದಿರುವವರೆಗೂ ಅವನು ಬಾಳು ಬಂಡವಾಳದ ಕೈಯಲ್ಲಿರುತ್ತದೆ ಎನ್ನುವುದೇ ಈ ಸಾಮ್ಯ!

# IV

ಬಂಡವಾಳವು ಬೆಳೆದರೆ, ಕೂಲಿಕೆಲಸದ ಪರಿಮಾಣವು ಬೆಳೆಯುತ್ತದೆ, ಕೂಲಿಕೆಲಸಗಾರರ ಸಂಖ್ಯೆ ಹೆಚ್ಚಾಗುತ್ತದೆ; ಒಂದೇ ಮಾತಿನಲ್ಲಿ ಹೇಳಬೇಕಾದರೆ, ಬಂಡವಾಳದ ದಬ್ಬಾಳಿಕೆಯು ಇನ್ನೂ ಹೆಚ್ಚಿನ ವ್ಯಕ್ತಿಗಳ ಮೇಲೆ ವಿಸ್ತಾರಹೊಂದುತ್ತದೆ. ಉತ್ಪತ್ತಿದಾಯಕವಾದ ಬಂಡವಾಳವು ಬೆಳೆದಾಗ, ಅದರಿಂದ ಆಗಬಹುದಾದ ಅತ್ಯಂತ ಅನುಕೂಲವಾದ ಪರಿಣಾಮವೆಂದರೆ, ಕೆಲಸಗಾರರಿಗೆ ಗಿರಾಕಿ ಹೆಚ್ಚುತ್ತದೆ. ಅದರಿಂದಾಗಿ, ಕೆಲಸಗಾರರ ಬೆಲೆಯಾದ ಕೂಲಿಯು ಏರುತ್ತದೆ.

ಒಂದು ಮನೆಯು ದೊಡ್ಡದಾಗಿರಬಹುದು ಅಥವಾ ಸಣ್ಣದಾಗಿರಬಹುದು; ಅದರ ಸುತ್ತಮುತ್ತಲಿರುವ ಮನೆಗಳು ಅದರಷ್ಟೇ ಸಣ್ಣದಾಗಿರುವ ವರೆಗೂ, ವಸತಿಗೆ ಇರಬೇಕಾದ ಎಲ್ಲಾ ಸಾಮಾಜಿಕ ಅರ್ಹತೆಗಳೂ ಆ ಮನೆಯಲ್ಲಿರುವಂತೆ ತೋರಿಬರುತ್ತದೆ. ಆ ಸಣ್ಣ ಮನೆಯ ಪಕ್ಕದಲ್ಲಿ ಒಂದು ಅರಮನೆ ನಿರ್ಮಾಣವಾಗಿಬಿಡಲಿ; ಕೂಡಲೇ ಆ ಸಣ್ಣ ಮನೆಯು ಒಂದು ಗುಡಿಸಲಿನ ಮಟ್ಟಕ್ಕೆ ಇಳಿದುಬಿಡುವುದು. ಆ ಸಣ್ಣ ಮನೆಯ ಯಜಮಾನನಿಗೆ ಬೇಕಾಗಿರುವ ಸೌಲಭ್ಯಗಳು ಬಹಳ ಅಲ್ಪವೆಂಬುದನ್ನು ಆ ಸಣ್ಣ ಮನೆಯು ಈಗ ತೋರಿಸಿಕೊಡುತ್ತದೆ; ನಾಗರೀಕತೆಯ ಪ್ರಗತಿಯಲ್ಲಿ ಆ ಸಣ್ಣ ಮನೆ ಎಷ್ಟೇ ಉನ್ನತವಾದರೂ ಕೂಡ, ಅದರ ಪಕ್ಕದ ಅರಮನೆಯು ಅಷ್ಟರ ಮಟ್ಟಿಗಾಗಲೀ ಅಥವಾ ಇನ್ನೂ ಹೆಚ್ಚಾಗಿಯಾಗಲಿ ಬೆಳೆದರೆ, ಹೋಲಿಕೆಯಲ್ಲಿ ಸಣ್ಣದಾಗಿರುವ ಮನೆಯಲ್ಲಿ ವಾಸಿಸುವವನು ತನ್ನ ಮನೆಯಲ್ಲಿ ಸೌಕರ್ಯ ಸಾಲದೆಂದು ಹೆಚ್ಚು ಹೆಚ್ಚಾಗಿ ಭಾವಿಸುತ್ತಾನೆ, ಹೆಚ್ಚು ಹೆಚ್ಚಾಗಿ [illegible] ಕಟ್ಟಿದಂತಾಗುತ್ತದೆ.

ಕೂಲಿಯು ಗಮನಾರ್ಹವಾಗಿ ಹೆಚ್ಚಬೇಕಾದರೆ ಉತ್ಪತ್ತಿದಾಯಕವಾದ ಬಂಡವಾಳವು ವೇಗವಾಗಿ ಬೆಳೆಯಲೇಬೇಕು. ಉತ್ಪತ್ತಿದಾಯಕವಾದ ಬಂಡವಾಳವು ವೇಗವಾಗಿ ಬೆಳೆಯುವುದರಿಂದ ಐಶ್ವರ್ಯ, ಭೋಗಜೀವನ, ಸಾಮಾಜಿಕ ಅವಶ್ಯಕತೆಗಳು, ಸಾಮಾಜಿಕ ಸಂತೋಷ ಸಾಧನಗಳು, ಇವೆಲ್ಲವೂ ಅಷ್ಟೇ ವೇಗವಾಗಿ ಬೆಳೆಯುತ್ತವೆ. ಕೆಲಸಗಾರನ ಅನುಕೂಲತೆಗಳು ಹೆಚ್ಚಾದರೂ ಕೂಡ,

ಬಂಡವಾಳಗಾರನ ಮತ್ತಷ್ಟು ಹೆಚ್ಚಿರುವ ಭೋಗದೊಂದಿಗೆ ಹೋಲಿಸಿದಾಗ—ಈ ಭೋಗವು ಕೆಲಸಗಾರನಿಗೆ ಎಟಕುವುದಿಲ್ಲ—ಒಟ್ಟಿನಲ್ಲಿ ಸಮಾಜದ ಬೆಳವಣಿಗೆಯ ಸ್ಥಿತಿಯೊಂದಿಗೆ ಹೋಲಿಸಿದಾಗ, ಕೆಲಸಗಾರನ ಹೆಚ್ಚಿನ ಅನುಕೂಲತೆಗಳಿಂದ ಅವನಿಗೆ ಮೊದಲಿನಷ್ಟು ಸಾಮಾಜಿಕ ತೃಪ್ತಿ ಕೂಡ ದೊರೆಯುವುದಿಲ್ಲ. ನಮ್ಮ ಅವಶ್ಯಕತೆಗಳೂ ಸಂತೋಷ ವಿಷಯಗಳೂ ಸಮಾಜದಿಂದ ಉದ್ಭವಿಸುತ್ತವೆ. ಆದುದರಿಂದ ಅವುಗಳನ್ನು ಸಾಮಾಜಿಕ ಅಳತೆಯ ಮೂಲಕ ಅಳೆಯುತ್ತೇವೆಯೇ ಹೊರತು ನಮ್ಮ ಅವಶ್ಯಕತೆಗಳನ್ನು ಪೂರೈಸುವ ಪದಾರ್ಥಗಳ ಮೂಲಕವಲ್ಲ. ನಮ್ಮ ಅವಶ್ಯಕತೆಗಳು ಸಾಮಾಜಿಕ ಸ್ವಭಾವವನ್ನು ಹೊಂದಿರುವುದರಿಂದ, ಅವುಗಳು ಸಾಪೇಕ್ಷ ಸ್ವಭಾವ ಉಳ್ಳವುಗಳು. (ಅಂದರೆ ಇಂದು ಸಾಕಾಗಿರುವ ಅವಶ್ಯಕತೆಗಳು ನಾಳೆ ಸಾಲದೆ ಬರಬಹುದು—ಭಾಷಾಂತರಕಾರ).

ಕೂಲಿಯ ಹಣದಿಂದ ವಿನಿಮಯದ ಮೂಲಕ ಪಡೆಯಬಹುದಾದ ಪದಾರ್ಥಗಳ ಪರಿಮಾಣಕ್ಕನುಗುಣವಾಗಿ ಮಾತ್ರವೇ ಕೂಲಿಯು ನಿರ್ಧಾರವಾಗುವುದಿಲ್ಲ. ಕೂಲಿಯು ವಿವಿಧ ಸಂಬಂಧಗಳನ್ನು ಒಳಗೊಂಡಿದೆ.

ಕೆಲಸಗಾರರು ಕೂಲಿ ಎಂದು ಪಡೆಯುವುದು ಮೊದಲಾಗಿ ಒಂದು ನಿರ್ದಿಷ್ಟವಾದ ಹಣದ ಮೊಬಲಗನ್ನು. ಈ ಹಣ ರೂಪದ ಬೆಲೆಯಿಂದ ಮಾತ್ರವೇ ಕೂಲಿ ನಿರ್ಧಾರವಾಗುತ್ತದೆಯೇ?

ಹದಿನಾರನೆಯ ಶತಮಾನದಲ್ಲಿ, ಹೆಚ್ಚು ಸಮೃದ್ಧವಾದ ಮತ್ತು ಇನ್ನೂ ಸುಲಭವಾಗಿ ಕೆಲಸ ಮಾಡಬಲ್ಲ ಗಣಿಗಳನ್ನು ಅಮೇರಿಕದಲ್ಲಿ ಕಂಡುಹಿಡಿದುದರ ಪರಿಣಾಮವಾಗಿ, ಯೂರೋಪಿನಲ್ಲಿ ಚಿನ್ನ ಮತ್ತು ಬೆಳ್ಳಿಯ ಚಲಾವಣೆ ಹೆಚ್ಚಿತು. ಆದುದರಿಂದ, ಇತರ ಪದಾರ್ಥಗಳ ಸಂಬಂಧದಲ್ಲಿ ಚಿನ್ನ ಮತ್ತು ಬೆಳ್ಳಿಯ ಮೌಲ್ಯ ಕಮ್ಮಿ ಆಯಿತು. ಕೆಲಸಗಾರರು ತಮ್ಮ ದುಡಿಯುವ ಶಕ್ತಿಗೆ ಬದಲಾಗಿ ಮೊದಲಿನಷ್ಟೇ ಬೆಳ್ಳಿ ನಾಣ್ಯಗಳನ್ನು ಪಡೆಯುತ್ತಿದ್ದರು. ಅವರ ದುಡಿಯುವ ಶಕ್ತಿಯ ಹಣರೂಪದ ಬೆಲೆ ಮೊದಲಿನಷ್ಟೇ ಇದ್ದರೂ ಕೂಡ ಅವರ ಕೂಲಿಯು ಕಮ್ಮಿ ಆಯಿತು. ಏಕೆಂದರೆ ತಾವು ಪಡೆದ ಬೆಳ್ಳಿಗೆ ಬದಲಾಗಿ ಅವರಿಗೆ ಮೊದಲಿಗಿಂತಲೂ ಕಮ್ಮಿ ಪದಾರ್ಥಗಳು ದೊರೆಯುತ್ತಿತ್ತು. ಹದಿನಾರನೆಯ ಶತಮಾನದಲ್ಲಿ

ಬಂಡವಾಳ ಬೆಳೆಯುವುದಕ್ಕೂ ಮತ್ತು ಬೂರ್ಜ್ವಾ ವರ್ಗವು (ಬಂಡವಾಳಗಾರ ವರ್ಗವು) ಮೇಲೇಳುವುದಕ್ಕೂ ಸಹಾಯಕವಾಗಿದ್ದ ಸಂದರ್ಭಗಳಲ್ಲಿ ಇದೂ ಒಂದು.

ಇನ್ನೊಂದು ಸಂದರ್ಭವನ್ನು ತೆಗೆದುಕೊಳ್ಳೋಣ. 1847ರ ಚಳಿಗಾಲದಲ್ಲಿ, ಬೆಳೆ ಕೆಟ್ಟು ಹೋದುದರ ಪರಿಣಾಮವಾಗಿ, ಜೀವನಕ್ಕೆ ಅತ್ಯಗತ್ಯವಾದ ಪದಾರ್ಥಗಳಾದ, ಕಾಳು, ಮಾಂಸ, ಬೆಣ್ಣೆ, ಚೀಸ್ ಮುಂತಾದ ಪದಾರ್ಥಗಳ ಬೆಲೆಗಳು ಬಹಳಮಟ್ಟಿಗೆ ಏರಿದವು. ತಮ್ಮ ದುಡಿಯುವ ಶಕ್ತಿಗೆ ಕೆಲಸಗಾರರು ಮೊದಲಿನಷ್ಟೇ ಹಣವನ್ನು ಪಡೆಯುತ್ತಾರೆಂದು ಭಾವಿಸೋಣ. ಹಾಗಾದರೆ ಅವರ ಕೂಲಿ ಕಮ್ಮಿಯಾದಂತಾಗಲಿಲ್ಲವೇ? ಖಂಡಿತವಾಗಿ, ಏಕೆಂದರೆ ಅದೇ ಹಣಕ್ಕೆ ಅವರಿಗೆ ರೊಟ್ಟಿ, ಮಾಂಸ—ಮುಂತಾದುವುಗಳು ಈಗ ಮೊದಲಿಗಿಂತ ಕಮ್ಮಿಯಾಗಿ ದೊರೆಯುತ್ತವೆ. ಬೆಳ್ಳಿಯ ಮೌಲ್ಯವು ಕೆಳಗಿಳಿಯದಿದ್ದರೂ ಕೂಡ, ಕೆಲಸಗಾರರ ಕೂಲಿ ಕಮ್ಮಿಯಾಯಿತು; ಬದುಕಿಗೆ ಬೇಕಾದ ಪದಾರ್ಥಗಳ ಮೌಲ್ಯ ಹೆಚ್ಚಿದುದೇ ಇದಕ್ಕೆ ಕಾರಣ.

ಕೊನೆಯದಾಗಿ, ಕೆಲಸದ ಹಣರೂಪದ ಬೆಲೆ ಹೆಚ್ಚು ಕಮ್ಮಿಯಾಗದೆ ಇದ್ದು, ಹೊಸ ಯಂತ್ರೋಪಕರಣದ ಉಪಯೋಗದಿಂದಲೂ, ಮಳೆ ಬೆಳೆ ಚನ್ನಾಗಿ ಆಗಿದ್ದರಿಂದಲೂ ಎಲ್ಲಾ ವ್ಯವಸಾಯ ಪದಾರ್ಥಗಳ ಮತ್ತು ಕೈಗಾರಿಕೆಯ ಪದಾರ್ಥಗಳ ಬೆಲೆ ಕಮ್ಮಿಯಾಗಿದೆಯೆಂದು ಭಾವಿಸೋಣ. ಅದೇ ಹಣಕ್ಕೆ, ಕೆಲಸಗಾರರು ಎಲ್ಲಾ ವಿಧವಾದ ಪದಾರ್ಥಗಳನ್ನೂ ಮೊದಲಿಗಿಂತ ಹೆಚ್ಚಾಗಿ ಈಗ ಕೊಳ್ಳಬಹುದು. ಆದುದರಿಂದ, ಅವರ ಕೂಲಿಯ ಹಣರೂಪದ ಮೌಲ್ಯವು ಹೆಚ್ಚು ಕಮ್ಮಿಯಾಗದೆ ಇರುವುದರಿಂದಲೇ, ಅವರ ಕೂಲಿಯು ಹೆಚ್ಚಾಯಿತು.

ಹೀಗೆ ಹಣರೂಪದ ಕೂಲಿಯೂ, ಅಂದರೆ ಕೆಲಸದ ಹಣರೂಪದ ಬೆಲೆಯೂ, ಮತ್ತು ನಿಜವಾದ ಕೂಲಿಯೂ, ಅಂದರೆ ಕೂಲಿಯ ಹಣಕ್ಕೆ ವಿನಿಮಯದಲ್ಲಿ ಬರುವ ಪದಾರ್ಥಗಳ ಮೊತ್ತವೂ, ಯಾವಾಗಲೂ ಒಂದೇ ಆಗಿರುವುದಿಲ್ಲ. ಆದುದರಿಂದ ಕೂಲಿ ಹೆಚ್ಚಿದೆ ಅಥವಾ ಕಮ್ಮಿಯಾಗಿದೆ ಎಂದು ನಾವು ಹೇಳುವಾಗ, ಹಣರೂಪದ ಕೂಲಿಯನ್ನಷ್ಟೇ, ಕೆಲಸದ ಹಣರೂಪದ ಬೆಲೆಯನ್ನಷ್ಟೇ ಮನಸ್ಸಿನಲ್ಲಿಟ್ಟುಕೊಂಡಿರಬಾರದು.

ಆದರೆ ಹಣರೂಪದ ಕೂಲಿ, ಅಂದರೆ ಬಂಡವಾಳಗಾರನಿಗೆ ಕೆಲಸಗಾರನು ತನ್ನನ್ನು ಮಾರಿಕೊಳ್ಳುವ ಹಣದ ಮೊಬಲಗು, ಮತ್ತು ನಿಜವಾದ ಕೂಲಿ, ಅಂದರೆ ಆ ಹಣದ ಮೊಬಲಗಿಗೆ ಕೆಲಸಗಾರನು ಕೊಂಡುಕೊಳ್ಳಬಹುದಾದ ಪದಾರ್ಥಗಳ ಮೊತ್ತ, ಈ ಎರಡು ಸಂಬಂಧಗಳನ್ನು ಮಾತ್ರ ಕೂಲಿಯು ಒಳಗೊಂಡಿದೆಯೆಂದು ತಿಳಿಯಕೂಡದು.

ಎಲ್ಲಕ್ಕಿಂತ ಹೆಚ್ಚಾಗಿ, ಬಂಡವಾಳಗಾರನ ಸಂಪಾದನೆಗೂ, ಅವನ ಲಾಭಕ್ಕೂ ಮತ್ತು ಕೂಲಿಗೂ ಇರುವ ಸಂಬಂಧದಿಂದ ಕೂಡ ಕೂಲಿಯು ನಿರ್ಧಾರವಾಗುತ್ತದೆ. ಇದನ್ನು ಹೋಲಿಕೆಯಲ್ಲಿ ತೋರಿಬರುವಂತಹ, ಸಾಪೇಕ್ಷ ಕೂಲಿ ಎನ್ನುತ್ತೇವೆ.

ನಿಜವಾದ ಕೂಲಿಯು ಕೆಲಸದ ಬೆಲೆಯನ್ನು ಇತರ ಪದಾರ್ಥಗಳ ಬೆಲೆಯ ಸಂಬಂಧದಲ್ಲಿ ವ್ಯಕ್ತಪಡಿಸುತ್ತದೆ; ಸಾಪೇಕ್ಷ ಕೂಲಿಯಾದರೋ, ನೇರವಾದ ಕೆಲಸವು ಸೃಷ್ಟಿಸುವ ಹೊಸ ಮೌಲ್ಯದಲ್ಲಿ ಕೆಲಸಗಾರನ ನೇರವಾದ ಕೆಲಸಕ್ಕೆ ಯಾವ ಪಾಲು ಸಿಕ್ಕುತ್ತದೆ ಮತ್ತು ಶೇಖರವಾಗಿರುವ ಕೆಲಸವಾದ ಬಂಡವಾಳಕ್ಕೆ ಯಾವ ಪಾಲು ಸಿಕ್ಕುತ್ತದೆ ಎನ್ನುವುದನ್ನು ವ್ಯಕ್ತಪಡಿಸುತ್ತದೆ.

ನಾವು 3ನೆಯ ಪುಟದಲ್ಲಿ ಹೇಳಿರುವಂತೆ: "ಕೂಲಿ ಎನ್ನುವುದು ಕೆಲಸಗಾರನು ತಯಾರು ಮಾಡುವ ಪದಾರ್ಥದಲ್ಲಿ ಅವನ ಪಾಲಲ್ಲ. ಈಗಾಗಲೇ ಇರುವ ಪದಾರ್ಥಗಳಲ್ಲಿನ ಒಂದು ಭಾಗ ಅದು. ಅದರ ಮೂಲಕ ಬಂಡವಾಳಗಾರನು ಉತ್ಪತ್ತಿದಾಯಕವಾದ ದುಡಿಯುವ ಶಕ್ತಿಯ ಒಂದು ನಿರ್ದಿಷ್ಟ ಪರಿಮಾಣವನ್ನು ತನ್ನ ಉಪಯೋಗಕ್ಕಾಗಿ ಕೊಳ್ಳುತ್ತಾನೆ". ಆದರೆ ಕೆಲಸಗಾರನು ಉತ್ಪತ್ತಿಮಾಡಿದ [illegible] ಬಂಡವಾಳಗಾರನು ತಾನು ಕೆಲಸಗಾರನಿಗೆ [illegible] ಬರುವಂತೆ, ಬಂಡವಾಳಗಾರನು ತನ್ನ ಕೂಲಿಯ ಹಣದಿಂದ ಪ್ರತಿಫಲ ಪಡೆಯಬೇಕು. ಕೆಲಸಗಾರನು ಉತ್ಪತ್ತಿ ಮಾಡುವ ಪದಾರ್ಥಗಳ ಮಾರಾಟದ ಬೆಲೆಯು ಬಂಡವಾಳಗಾರನ ಕೈಯಲ್ಲಿ ಮೂರು ಪಾಲಾಗಿ ವಿಭಾಗವಾಗುತ್ತದೆ—ಮೊದಲನೆಯದಾಗಿ, ತಾನು ಒದಗಿಸಿದ ಕಚ್ಚಾ ಪದಾರ್ಥಗಳ ಬೆಲೆ ಮತ್ತು ಸಲಕರಣೆಗಳ, ಯಂತ್ರದ ಮತ್ತು ಕೆಲಸದ ಇತರ ಸಾಧನಗಳ ಸವೆತದಿಂದಾಗುವ ನಷ್ಟ ಇವುಗಳನ್ನು

ವಾಪಸು ಪಡೆಯಬೇಕು; ಎರಡನೆಯದಾಗಿ, ತಾನು ಕೊಟ್ಟ ಕೂಲಿಹಣವನ್ನು ವಾಪಸು ಪಡೆದುಕೊಳ್ಳಬೇಕು; ಮತ್ತು ಮೂರನೆಯದಾಗಿ ಇವೆರಡೂ ಹೋಗಿ ಮಿಗುವ ಉಳಿತಾಯ, ಬಂಡವಾಳಗಾರನ ಲಾಭ. ಇವುಗಳಲ್ಲಿ ಮೊದಲನೆಯ ಭಾಗದಿಂದ ಮೊದಲೇ ಇದ್ದ ಮೌಲ್ಯಗಳನ್ನು ಮಾತ್ರ ವಾಪಸು ಪಡೆದಂತಾಗುತ್ತದೆ. ಆದರೆ ಕೆಲಸಗಾರನ ಕೆಲಸದಿಂದ ಸೃಷ್ಟಿಯಾಗಿ ಕಚ್ಚಾ ಪದಾರ್ಥಗಳಿಗೆ ಸೇರಿಸಲ್ಪಟ್ಟಿರುವ ಹೊಸ ಮೌಲ್ಯದಿಂದಲೇ ಬಂಡವಾಳಗಾರನು ತಾನು ಕೊಟ್ಟಿದ್ದ ಕೂಲಿ ಹಣವನ್ನೂ ಮತ್ತು ತನ್ನ ಲಾಭವನ್ನೂ ಪಡೆಯುತ್ತಾನೆಂಬುದು ಸ್ಪಷ್ಟವಾಗಿದೆ. ಈ ಅರ್ಥದಲ್ಲಿ, ಮತ್ತು ಅವುಗಳನ್ನು ಪರಸ್ಪರ ಹೋಲಿಸುವುದಕ್ಕಾಗಿ, ಕೂಲಿಹಣ ಮತ್ತು ಲಾಭ ಇವೆರಡೂ ಕೆಲಸಗಾರನ ಉತ್ಪನ್ನದಲ್ಲಿನ ಪಾಲುಗಳೆಂದು ನಾವು ಪರಿಗಣಿಸಬಹುದು.

ನಿಜವಾದ ಕೂಲಿಯು ಮೊದಲಿನಷ್ಟೇ ಇದ್ದರೂ ಅಥವಾ ಹೆಚ್ಚಿದರೂ ಕೂಡ ಸಾಪೇಕ್ಷ ಕೂಲಿ ಇಳಿದುಹೋಗಬಹುದು. ಉದಾಹರಣೆಗೆ ಬದುಕಿಗೆ ಬೇಕಾದ ಎಲ್ಲಾ ಪದಾರ್ಥಗಳ ಬೆಲೆಯೂ ಮೂರನೇ ಎರಡರಷ್ಟು ಇಳಿದುಹೋಗಿದೆಯೆಂದೂ, ಆದರೆ ದಿನಕೂಲಿ ಮಾತ್ರ ಮೂರನೇ ಒಂದರಷ್ಟು ಮಾತ್ರ, ಅಂದರೆ ಮೂರು ಮಾರ್ಕುಗಳಿಂದ ಎರಡು ಮಾರ್ಕುಗಳಿಗೆ, ಇಳಿದಿದೆಯೆಂದೂ ಭಾವಿಸೋಣ. ಹಿಂದೆ ಮೂರು ಮಾರ್ಕುಗಳಿಗೆ ದೊರೆಯುತ್ತಿದ್ದ ಪದಾರ್ಥಗಳಿಗಿಂತಲೂ ಈಗ ಎರಡು ಮಾರ್ಕುಗಳಿಗೆ ಹೆಚ್ಚು ಪದಾರ್ಥಗಳನ್ನು ಕೆಲಸಗಾರನು ಪಡೆದರೂ ಕೂಡ, ಬಂಡವಾಳಗಾರನ ಲಾಭದೊಂದಿಗೆ ಹೋಲಿಸಿ ನೋಡಿದರೆ, ಅವನ ಕೂಲಿಯು ಕಮ್ಮಿಯಾಗಿದೆಯೆಂದು ಹೇಳಬೇಕು. ಬಂಡವಾಳಗಾರನ ಲಾಭವು ಒಂದು ಮಾರ್ಕಿನಷ್ಟು ಹೆಚ್ಚಾಯಿತು, ಅಂದರೆ ಬಂಡವಾಳಗಾರನು ಕೆಲಸಗಾರನಿಗೆ ಮೊದಲಿಗಿಂತಲೂ ಕಮ್ಮಿ ವಿನಿಮಯ ಮೌಲ್ಯವನ್ನು ಕೊಟ್ಟರೂ ಕೂಡ, ಕೆಲಸಗಾರನು ಮೊದಲಿಗಿಂತ ಹೆಚ್ಚಾದ ವಿನಿಮಯ ಮೌಲ್ಯವನ್ನು ಉತ್ಪತ್ತಿ ಮಾಡಬೇಕಾಗಿದೆ. ಕೆಲಸದ ಪಾಲಿನೊಂದಿಗೆ ಹೋಲಿಸಿದರೆ ಬಂಡವಾಳದ ಪಾಲು ಅಧಿಕವಾಗಿದೆ. ಬಂಡವಾಳ ಮತ್ತು ಕೆಲಸ ಇವುಗಳ ನಡುವೆ ಸಾಮಾಜಿಕ ಸಂಪತ್ತು ಇನ್ನೂ ಹೆಚ್ಚು ಅಸಮಾನವಾಗಿ ವಿಭಾಗವಾದಂತಾಯಿತು. ಅದೇ ಬಂಡವಾಳದಿಂದ, ಬಂಡವಾಳಗಾರನು ಮೊದಲಿಗಿಂತ ಹೆಚ್ಚಿನ ಪರಿಮಾಣದ ಕೆಲಸಕ್ಕೆ ಅಧಿಪತಿಯಾಗಿರು

ತ್ತಾನೆ. ಕಾರ್ಮಿಕ ವರ್ಗದ ಮೇಲೆ ಬಂಡವಾಳಗಾರ ವರ್ಗದ ಪ್ರಾಬಲ್ಯ ಹೆಚ್ಚು ತ್ತದೆ. ಕೆಲಸಗಾರನ ಸಾಮಾಜಿಕ ಸ್ಥಿತಿಯು ಮತ್ತಷ್ಟು ಕೆಡುತ್ತದೆ; ಬಂಡವಾಳಗಾರನ ಸಾಮಾಜಿಕ ಸ್ಥಿತಿಗಿಂತ ಕೂಲಿಗಾರನ ಸಾಮಾಜಿಕ ಸ್ಥಿತಿಯು ಮತ್ತೊಂದು ಹಂತ ಕೆಳಗಿಳಿಯುತ್ತದೆ.

ಹಾಗಾದರೆ, ಕೂಲಿ ಮತ್ತು ಲಾಭ ಇವುಗಳು ಪರಸ್ಪರವಾಗಿ ಹೆಚ್ಚು ಕಮ್ಮಿಯಾಗುವುದನ್ನು ನಿರ್ಧರಿಸುವ ಸಾಮಾನ್ಯ ನಿಯಮವು ಯಾವುದು?

ಅವುಗಳ ನಡುವೆ ಇರುವ ಪರಸ್ಪರ ಸಂಬಂಧವು ತಲೆಕೆಳಗಿನ ಸಂಬಂಧ. ಕೆಲಸದ ಪಾಲಾದ, ಕೂಲಿಯು, ಯಾವ ಪ್ರಮಾಣದಲ್ಲಿ ಕಮ್ಮಿಯಾಗುವುದೋ ಅದೇ ಪ್ರಮಾಣದಲ್ಲಿ, ಬಂಡವಾಳದ ಪಾಲಾದ ಲಾಭವು ಹೆಚ್ಚುವುದು; ಕೂಲಿ ಹೆಚ್ಚುವ ಪ್ರಮಾಣದಲ್ಲೇ ಲಾಭವು ಕಮ್ಮಿಯಾಗುವುದು. ಕೂಲಿಯು ಕಮ್ಮಿಯಾಗುವ ಮಟ್ಟಿಗೆ ಲಾಭವು ಹೆಚ್ಚುತ್ತದೆ; ಕೂಲಿಯು ಹೆಚ್ಚಾಗುವ ಮಟ್ಟಿಗೆ ಲಾಭವು ಕಮ್ಮಿಯಾಗುತ್ತದೆ.

ಈ ಮಾತಿಗೆ ಕೆಳಗಂಡ ಆಕ್ಷೇಪಣೆಯನ್ನು ಯಾರಾದರೂ ಮಾಡಬಹುದು: ಇತರ ಬಂಡವಾಳಗಾರರೊಂದಿಗೆ ತನ್ನ ಪದಾರ್ಥಗಳನ್ನು ಅನುಕೂಲವಾಗಿ ವಿನಿಮಯ ಮಾಡಿಕೊಳ್ಳುವುದರ ಮೂಲಕ ಬಂಡವಾಳಗಾರನು ಲಾಭ ಪಡೆಯಬಹುದೆಂದೂ, ಹೊಸ ಮಾರುಕಟ್ಟೆಗಳು (ವ್ಯಾಪಾರ ಕ್ಷೇತ್ರಗಳು) ದೊರಕುವುದರಿಂದಾಗಲೀ ಅಥವಾ ಹಳೆಯ ಮಾರುಕಟ್ಟೆಗಳಲ್ಲಿಯೇ ಗಿರಾಕಿಯು ತಾತ್ಕಾಲಿಕವಾಗಿ ಹೆಚ್ಚಾಗುವುದರಿಂದಾಗಲೀ ತನ್ನ ಪದಾರ್ಥಗಳಿಗೆ ಗಿರಾಕಿ ಹೆಚ್ಚುವುದರಿಂದ ಬಂಡವಾಳಗಾರನು ಲಾಭ ಪಡೆಯಬಹುದೆಂದೂ ಆಕ್ಷೇಪಣೆ ಮಾಡಬಹುದು. ಆದುದರಿಂದ ಕೂಲಿಯು, ಅಂದರೆ ದುಡಿಯುವ ಶಕ್ತಿಯ ವಿನಿಮಯ ಮೌಲ್ಯದ, ಏರಿಳಿತಕ್ಕೆ ಸಂಬಂಧವಿಲ್ಲದೆಯೇ ಬಂಡವಾಳಗಾರನು, ಇತರ ಬಂಡವಾಳಗಾರರಿಗೆ ಟೋಪಿ ಹಾಕಿ, ತನ್ನ ಲಾಭವನ್ನು ಹೆಚ್ಚಿಸಿಕೊಳ್ಳಬಹುದೆಂದೂ ಅಥವಾ ಕೆಲಸದ ಸಲಕರಣೆಗಳ ಅಭಿವೃದ್ಧಿಯ ಫಲವಾಗಿ, ಪ್ರಕೃತಿಯ ಶಕ್ತಿಗಳ ಹೊಸ ಉಪಯೋಗದ ಫಲವಾಗಿ ಕೂಡ, ಬಂಡವಾಳಗಾರನ ಲಾಭವು ಹೆಚ್ಚಬಹುದೆಂದೂ ಯಾರಾದರೂ ಹೇಳಬಹುದು.

ಮೊದಲನೆಯದಾಗಿ, ಇದರಿಂದ ಪರಿಣಾಮ ವ್ಯತ್ಯಾಸವಾಗುವುದಿಲ್ಲವೆಂಬುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ; ಆದರೆ ಈ ಪರಿಣಾಮವು ಮಾತ್ರ ಬೇರೆ ವಿಧದಲ್ಲಿ, ವಿರೋಧವಾದ ರೀತಿಯಲ್ಲಿ, ಈಗ ಉಂಟಾಗುತ್ತದೆ. ಈಗ ಕೂಲಿಯು ಕಮ್ಮಿಯಾಗಿರುವುದರಿಂದ ಲಾಭವು ಹೆಚ್ಚಿಲ್ಲ, ಪ್ರತಿಯಾಗಿ, ಲಾಭವು ಹೆಚ್ಚಿರುವುದರಿಂದ ಕೂಲಿಯು ಕಮ್ಮಿಯಾಗಿದೆ. ಇತರ ಜನಗಳ ಕೆಲಸದ ಮೊದಲಿನಷ್ಟೇ ಪರಿಮಾಣದಿಂದ, ಬಂಡವಾಳಗಾರನು ಕೆಲಸ ಮಾಡಿದವನಿಗೆ ಹೆಚ್ಚಿಗೆ ಹಣವನ್ನೇನೂ ಕೊಡುವುದಿಲ್ಲ. ಅಂದರೆ ಬಂಡವಾಳಗಾರನಿಗೆ ಕೆಲವು ಉತ್ಪತ್ತಿ ಮಾಡಿಕೊಡುವ ನಿವ್ವಳ ಲಾಭದೊಂದಿಗೆ ಹೋಲಿಸಿದರೆ ಕೆಲಸಕ್ಕೆ ಮೊದಲಿಗಿಂತ ಕಮ್ಮಿ ಸಿಕ್ಕಿದಂತಾಯಿತು.

ಇದಲ್ಲದೆ, ಪದಾರ್ಥಗಳ ಬೆಲೆಗಳಲ್ಲಿ ಏರಿಳಿತವಿದ್ದರೂ ಕೂಡ, ಪ್ರತಿಯೊಂದು ಪದಾರ್ಥದ ಸರಾಸರಿ ಬೆಲೆಯು, ಅಂದರೆ ಇತರ ಪದಾರ್ಥಗಳಿಗೆ ಅದು ವಿನಿಮಯವಾಗುವ ಪ್ರಮಾಣವು, ಆ ಪದಾರ್ಥದ ಉತ್ಪತ್ತಿಯ ವೆಚ್ಚದಿಂದ ನಿರ್ಧಾರವಾಗುವುದೆಂಬುದನ್ನು ಜ್ಞಾಪಿಸಿಕೊಳ್ಳೋಣ. ಆದುದರಿಂದ ಬಂಡವಾಳಗಾರ ವರ್ಗದಲ್ಲಿ, ಪ್ರತಿಯೊಬ್ಬ ಬಂಡವಾಳಗಾರನೂ ಇತರ ಬಂಡವಾಳಗಾರರಿಗೆ ಟೋಪಿ ಹಾಕಿದರೆ, ಆದರಿಂದ ಅವಶ್ಯಕವಾಗಿ ಲಾಭ ನಷ್ಟಗಳು ಒಂದಕ್ಕೊಂದು ಸರಿಹೋಗುವುವು. ಯಂತ್ರೋಪಕರಣಗಳ ಅಭಿವೃದ್ಧಿಯಿಂದ, ಉತ್ಪತ್ತಿಯ ವೃದ್ಧಿಗೆ ಪ್ರಕೃತಿ ಶಕ್ತಿಗಳ ಹೊಸ ಉಪಯೋಗದಿಂದ, ಮೊದಲಿನಷ್ಟೇ ಕೆಲಸ ಮತ್ತು ಬಂಡವಾಳಗಳ ಸಹಾಯದಿಂದ ಒಂದು ನಿರ್ದಿಷ್ಟ ಕಾಲದಲ್ಲಿ ಮೊದಲಿಗಿಂತ ಹೆಚ್ಚು ಪದಾರ್ಥಗಳನ್ನು ಉತ್ಪತ್ತಿ ಮಾಡಬಹುದು; ಆದರೆ ಇದರಿಂದ ಹೆಚ್ಚಿಗೆ ವಿನಿಮಯ ಮೌಲ್ಯಗಳನ್ನು ಉತ್ಪತ್ತಿ ಮಾಡಿದಂತಾಗುವುದಿಲ್ಲ. ನೂಲುವ ಜೆನ್ನಿಯನ್ನು ಉಪಯೋಗಿಸುವುದರಿಂದ, ಗಂಟೆಯೊಂದಕ್ಕೆ ಮೊದಲಿಗಿಂತ ಎರಡರಷ್ಟು ನೂಲನ್ನು, ಉದಾಹರಣೆಗೆ ಐವತ್ತು ಪೌಂಡುಗಳಿಗೆ ಬದಲಾಗಿ ನೂರು ಪೌಂಡುಗಳನ್ನು ಉತ್ಪತ್ತಿ ಮಾಡಿದರೆ, ಹಿಂದೆ ಐವತ್ತು ಪೌಂಡುಗಳಿಗೆ ವಿನಿಮಯದಲ್ಲಿ ಬರುತ್ತಿದ್ದ ಪದಾರ್ಥಗಳಿಗಿಂತ ಹೆಚ್ಚಾಗಿ ಈ ನೂರು ಪೌಂಡುಗಳಿಗೆ ಕಾಲಕ್ರಮದಲ್ಲಿ ಬರುವುದಿಲ್ಲ. ಏಕೆಂದರೆ ನೂಲಿನ ಉತ್ಪತ್ತಿಯ ವೆಚ್ಚವು ಅರ್ಧದಷ್ಟು ಕಮ್ಮಿಯಾಗಿದೆ; ಅದೇ ವೆಚ್ಚಕ್ಕೆ ಮೊದಲಿಗಿಂತ ಈಗ ಎರಡರಷ್ಟು ನೂಲನ್ನು ತಯಾರು ಮಾಡಿಕೊಡಬಹುದು.

ಕೊನೆಯದಾಗಿ, ಒಂದು ದೇಶದ ಬಂಡವಾಳಗಾರ ವರ್ಗವೇ ಆಗಲಿ ಅಥವಾ ಇಡೀ ಪ್ರಪಂಚ ಮಾರುಕಟ್ಟೆಯ ಬಂಡವಾಳಗಾರ ವರ್ಗವೇ ಆಗಲಿ, ಉತ್ಪತ್ತಿಯ ನಿವ್ವಳ ಲಾಭವನ್ನು ತಮ್ಮ ತಮ್ಮಲ್ಲಿ ಯಾವುದೇ ಪ್ರಮಾಣದಲ್ಲಿ ಹಂಚಿಕೊಂಡರೂ ಕೂಡ, ಈ ನಿವ್ವಳ ಲಾಭದ ಮೊತ್ತವು ಯಾವಾಗಲೂ ಎಷ್ಟಿರುವುದೆಂದರೆ, ನೇರವಾದ ಕೆಲಸವು ಶೇಖರವಾಗಿರುವ ಕೆಲಸವನ್ನು ಒಟ್ಟಿನಲ್ಲಿ ಎಷ್ಟರಮಟ್ಟಿಗೆ ಹೆಚ್ಚಿಸಿದೆಯೋ ಅಷ್ಟು ಮಾತ್ರವಿರುತ್ತದೆ. ಕೆಲಸವು ಬಂಡವಾಳವನ್ನು ಯಾವ ಪ್ರಮಾಣದಲ್ಲಿ ವೃದ್ಧಿಗೊಳಿಸುವುದೋ, ಅಂದರೆ ಕೂಲಿಯೊಂದಿಗೆ ಹೋಲಿಸಿದಾಗ ಲಾಭವು ಯಾವ ಪ್ರಮಾಣದಲ್ಲಿ ಹೆಚ್ಚುವುದೋ, ಅದೇ ಪ್ರಮಾಣದಲ್ಲಿ ಲಾಭದ ಈ ಮೊತ್ತವೂ ಕೂಡ ಬೆಳೆಯುತ್ತದೆ.

ಆದುದರಿಂದ ಬಂಡವಾಳ ಮತ್ತು ಕೂಲಿ ಕೆಲಸ ಇವುಗಳ ಸಂಬಂಧದೊಳಗೇ ನಾವು ಉಳಿದರೂ ಕೂಡ, ಬಂಡವಾಳದ ಹಿತಗಳೂ ಕೂಲಿ ಕೆಲಸದ ಹಿತಗಳೂ ನೇರವಾಗಿ ವಿರೋಧವಾಗಿರುವುದನ್ನು ನಾವು ಕಾಣುತ್ತೇವೆ.

ಬಂಡವಾಳವು ವೇಗವಾಗಿ ಅಧಿಕವಾಯಿತೆಂದರೆ, ಲಾಭವು ವೇಗವಾಗಿ ಅಧಿಕವಾಗಿದೆ ಎಂದರ್ಥ. ಲಾಭವು ವೇಗವಾಗಿ ಅಧಿಕವಾಗಬೇಕಾದರೆ, ಕೆಲಸದ ಬೆಲೆಯು, ಸಾಪೇಕ್ಷ ಕೂಲಿಯು, ಅಷ್ಟೇ ವೇಗವಾಗಿ ಕಮ್ಮಿಯಾಗಲೇಬೇಕು. ನಿಜವಾದ ಕೂಲಿಯೂ ಮತ್ತು ಕೆಲಸದ ಹಣ ರೂಪದ ಮೌಲ್ಯವಾದ ಹಣ ರೂಪದ ಕೂಲಿಯೂ ಹೆಚ್ಚಾದರೂ ಕೂಡ, ಲಾಭ ಹೆಚ್ಚುವ ಪ್ರಮಾಣದಲ್ಲಿ ಅವು ಹೆಚ್ಚದಿದ್ದರೆ, ಸಾಪೇಕ್ಷ ಕೂಲಿಯು ಕಮ್ಮಿಯಾಗಬಹುದು. ಉದಾಹರಣೆಗೆ ವ್ಯಾಪಾರ ಚನ್ನಾಗಿರುವ ಕಾಲದಲ್ಲಿ, ಕೂಲಿಯು ಶೇಖಡ ಐದರಷ್ಟು ಹೆಚ್ಚಿ, ಲಾಭವಾದರೋ ಶೇಖಡ ಮೂವತ್ತರಷ್ಟು ಹೆಚ್ಚಿದರೆ, ಸಾಪೇಕ್ಷ ಕೂಲಿ ಹೆಚ್ಚಿದಂತಾಗುವುದಿಲ್ಲ; ಪ್ರತಿಯಾಗಿ ಕಮ್ಮಿಯಾದಂತಾಯಿತು.

ಆದುದರಿಂದ, ಬಂಡವಾಳವು ವೇಗವಾಗಿ ಬೆಳೆಯುತ್ತಿರುವಾಗ ಕೆಲಸಗಾರನ ವರಮಾನವು ಹೆಚ್ಚಿದರೂ ಕೂಡ ಕೆಲಸಗಾರನನ್ನೂ ಬಂಡವಾಳಗಾರನನ್ನೂ ಪ್ರತ್ಯೇಕಿಸುವ ಸಾಮಾಜಿಕ ಅಂತರವು ಅದೇ ಕಾಲದಲ್ಲಿ ಅಧಿಕವಾಗುವುದು ಮತ್ತು ಕೆಲಸ

ಗಾರರ ಮೇಲೆ ಬಂಡವಾಳದ ಪ್ರಾಬಲ್ಯವು, ಬಂಡವಾಳಕ್ಕೆ ಕೆಲಸಗಾರರ ಅಧೀನತೆಯು, ಹಾಗೆಯೇ ಹೆಚ್ಚುವುದು.

ಬಂಡವಾಳವು ವೇಗವಾಗಿ ಬೆಳೆಯುವುದರಲ್ಲಿ ಕೆಲಸಗಾರನು ಆಸಕ್ತಿ ಹೊಂದಿದ್ದಾನೆ ಎನ್ನುವುದರಲ್ಲಿ ಇರುವ ಅರ್ಥವಿಷ್ಟೆ: ಕೆಲಸಗಾರನು ಇತರರ ಸಂಪತ್ತನ್ನು ಎಷ್ಟು ವೇಗವಾಗಿ ಹೆಚ್ಚಿಸುತ್ತಾನೋ, ಅಷ್ಟು ಅಧಿಕವಾಗಿ ಅವನಿಗೆ ಎಸೆಯಲ್ಪಡುವ ಚೂರುಗಳು ಹೆಚ್ಚುತ್ತವೆ, ಹೆಚ್ಚಿನ ಸಂಖ್ಯೆಯಲ್ಲಿ ಕೆಲಸಗಾರರಿಗೆ ಕೆಲಸ ದೊರೆತು ಜೀವ ಬಂದಂತಾಗುತ್ತದೆ ಮತ್ತು ಬಂಡವಾಳಕ್ಕೆ ಅಧೀನವಾಗಿರುವ ಗುಲಾಮರ ಗುಂಪನ್ನು ಮತ್ತಷ್ಟು ಹೆಚ್ಚಿಸಬಹುದು.

ಹೀಗೆ ನಾವು ಇದುವರೆಗೆ ಕಂಡಿರುವುದರ ಸಾರಾಂಶ ಹೀಗಿದೆ:

ಕಾರ್ಮಿಕ ವರ್ಗಕ್ಕೆ ಅತ್ಯಂತ ಅನುಕೂಲವಾದ ಪರಿಸ್ಥಿತಿಯು, ಅಂದರೆ ಬಂಡವಾಳವು ಆದಷ್ಟು ವೇಗವಾಗಿ ಬೆಳೆಯುತ್ತಿರುವ ಪರಿಸ್ಥಿತಿಯು, ಕೆಲಸಗಾರನ ಭೌತಿಕ ಜೀವನವನ್ನು ಎಷ್ಟೇ ಉತ್ತಮಗೊಳಿಸಿದರೂ ಕೂಡ, ಅವನ ಹಿತಗಳಿಗೂ ಮತ್ತು ಬೂರ್ಜ್ವಾ (ಬಂಡವಾಳಗಾರನ) ಹಿತಗಳಿಗೂ ನಡುವೆ ಇರುವ ವೈಷಮ್ಯವನ್ನು ಹೋಗಲಾಡಿಸುವುದಿಲ್ಲ. ಲಾಭ ಮತ್ತು ಕೂಲಿ ಇವುಗಳು ಮೊದಲಿನಂತೆಯೇ ತಲೆಕೆಳಗಾದ ಸಂಬಂಧವನ್ನು ಹೊಂದಿರುತ್ತವೆ.

ಬಂಡವಾಳವು ವೇಗವಾಗಿ ಬೆಳೆಯುತ್ತಿದ್ದರೆ, ಕೂಲಿಯು ಹೆಚ್ಚಬಹುದು; ಆದರೆ ಬಂಡವಾಳದ ಲಾಭವು ಹೋಲಿಸಲಾರದಷ್ಟು ಮಟ್ಟಿಗೆ, ಹೆಚ್ಚು ವೇಗವಾಗಿ ಅಧಿಕವಾಗುವುದು. ಕೆಲಸಗಾರನ ಭೌತಿಕ ಸ್ಥಿತಿಯು ಉತ್ತಮಗೊಂಡರೂ, ಅವನ ಸಾಮಾಜಿಕ ಸ್ಥಿತಿಯು ಕೆಡುವುದು. ಅವನನ್ನು ಬಂಡವಾಳಗಾರನಿಂದ ಬೇರ್ಪಡಿಸುವ ಸಾಮಾಜಿಕ ಅಂತರವು ಅಗಲವಾಗುತ್ತದೆ.

ಕೊನೆಯದಾಗಿ:

ಉತ್ಪತ್ತಿದಾಯಕವಾದ ಬಂಡವಾಳವು ಆದಷ್ಟು ವೇಗವಾಗಿ ಬೆಳೆಯುವುದು ಕೂಲಿ ಕೆಲಸಕ್ಕೆ ಅತ್ಯಂತ ಅನುಕೂಲವಾದ ಸ್ಥಿತಿಗತಿ ಎಂದು ಹೇಳುವುದರಲ್ಲಿರುವ ಅರ್ಥವಿಷ್ಟೆ: ತನಗೆ ವೈರಿಯಾಗಿರುವ ಶಕ್ತಿಯನ್ನು, ತನಗೆ ಸೇರದ ಆದರೆ ತನ್ನನ್ನು ಹತೋಟಿಯಲ್ಲಿಟ್ಟುಕೊಂಡಿರುವ ಸಂಪತ್ತನ್ನು, ಕಾರ್ಮಿಕ ವರ್ಗವು ಎಷ್ಟು ವೇಗವಾಗಿ ಅಧಿಕಗೊಳಿಸುವುದೋ ಮತ್ತು ವಿಸ್ತರಿಸುವುದೋ, ಅಷ್ಟರಮಟ್ಟಿಗೆ, ಬಂಡ

ವಾಳಗಾರ ವರ್ಗವು ಅದರ ಹಿಂದೆ ತನ್ನನ್ನು ಎಳೆದುಕೊಂಡು ಹೋಗಲು ಉಪಯೋಗಿಸುವ ಚಿನ್ನದ ಸರಪಣಿಗಳನ್ನು ತಯಾರಿಸುವುದರಲ್ಲೇ ತೃಪ್ತಿ ಹೊಂದಿದ್ದು, ಬೂರ್ಜುವಾ (ಬಂಡವಾಳಗಾರರ) ಸಂಪತ್ತನ್ನು ಹೆಚ್ಚಿಸುವುದಕ್ಕಾಗಿ, ಬಂಡವಾಳದ ಬಲವನ್ನು ವಿಸ್ತರಿಸುವುದಕ್ಕಾಗಿ, ಮತ್ತೆ ಶ್ರಮಿಸಲು ಕಾರ್ಮಿಕ ವರ್ಗಕ್ಕೆ ಇನ್ನೂ ಅನುಕೂಲವಾದ ಸ್ಥಿತಿಗತಿಗಳು ದೊರಕುವುವು ಎಂದರ್ಥ.

ಉತ್ಪತ್ತಿದಾಯಕವಾದ ಬಂಡವಾಳದ ಬೆಳವಣಿಗೆ ಮತ್ತು ಕೂಲಿಯು ಹೆಚ್ಚುವಿಕೆ,—ಇವೆರಡೂ ಬೂರ್ಜುವಾ ಅರ್ಥಶಾಸ್ತ್ರಜ್ಞರು ಹೇಳುವಷ್ಟು ಮಟ್ಟಿಗೆ ನಿಜವಾಗಿಯೂ ನಿಕಟವಾದ ಸಂಬಂಧವನ್ನು ಹೊಂದಿದೆಯೇ ? ಅವರು ಹೇಳಿಬಿಟ್ಟದ್ದಾರೆಂದು ನಾವು ಕೇಳಿ ಬಿಡಬಾರದು. ಬಂಡವಾಳವು ಕೊಬ್ಬಿದಷ್ಟೂ, ಅದರ ಗುಲಾಮನ ಪಾಡು ಉತ್ತಮವಾಗುತ್ತದೆ ಎಂದು ಅವರು ಹೇಳುವುದನ್ನು ಕೂಡ ನಾವು ನಂಬಬಾರದು. ಬೂರ್ಜುವಾ ವರ್ಗವು (ಬಂಡವಾಳಗಾರ ವರ್ಗವು) ಬಹಳ ತಿಳುವಳಿಕೆಯನ್ನು ಪಡೆದಿದೆ, ಅದು ಬಹಳ ಚನ್ನಾಗಿ ಲೆಕ್ಕಾಚಾರ ಮಾಡಬಲ್ಲದು. ತನ್ನ ಪರಿವಾರದ ಆಡಂಬರದಿಂದ ತನ್ನ ಐಶ್ವರ್ಯವನ್ನು ಪ್ರದರ್ಶಿಸುವ ಪಾಳೆಯಗಾರನ ಕುರುಡು ನಂಬಿಕೆಗಳನ್ನು ಬಂಡವಾಳಗಾರ ವರ್ಗವು ಇಟ್ಟುಕೊಂಡಿಲ್ಲ. ಬಂಡವಾಳಗಾರ ವರ್ಗವು ತಾನಿರುವ ಸ್ಥಿತಿಗತಿಗಳಿಂದಾಗಿ ಲೆಕ್ಕಾಚಾರ ಮಾಡದೆ ವಿಧಿಯಿಲ್ಲ.

ಆದುದರಿಂದ, ಉತ್ಪತ್ತಿದಾಯಕವಾದ ಬಂಡವಾಳದ ಬೆಳವಣಿಗೆಯಿಂದ ಕೂಲಿಯ ಮೇಲೆ ಆಗುವ ಪರಿಣಾಮವೇನು ? ಎಂಬ ಪ್ರಶ್ನೆಯನ್ನು ನಾವು ಹೆಚ್ಚು ಸೂಕ್ಷ್ಮವಾಗಿ ಪರೀಕ್ಷಿಸಬೇಕು.

ಒಟ್ಟಿನಲ್ಲಿ ಬೂರ್ಜುವಾ (ಬಂಡವಾಳಗಾರ) ಸಮಾಜದ ಉತ್ಪತ್ತಿದಾಯಕ ಬಂಡವಾಳವು ಬೆಳೆದರೆ ಹೆಚ್ಚು ವಿವಿಧವಾದ ರೀತಿಯಲ್ಲಿ ಕೆಲಸವು ಶೇಖರವಾಗುತ್ತದೆ. ಬಂಡವಾಳಗಳು ಸಂಖ್ಯೆಯಲ್ಲೂ ಮತ್ತು ಗಾತ್ರದಲ್ಲೂ ಅಧಿಕವಾಗುತ್ತವೆ. ಬಂಡವಾಳಗಳು ಹೆಚ್ಚುವುದರಿಂದ ಬಂಡವಾಳಗಾರರ ನಡುವೆ ಪೈಪೋಟಿ ಹೆಚ್ಚುತ್ತದೆ. ಇನ್ನೂ ಪ್ರಚಂಡ ಯುದ್ಧ ಸಲಕರಣೆಗಳೊಂದಿಗೆ ಇನ್ನೂ ಪ್ರಬಲವಾದ ಕಾರ್ಮಿಕ ಸೈನ್ಯಗಳನ್ನು ಕೈಗಾರಿಕೆಯ ರಣರಂಗಕ್ಕೆ ಕರೆತರಲು ಗಾತ್ರದಲ್ಲಿ ಅಧಿಕವಾಗುತ್ತಿರುವ ಬಂಡವಾಳಗಳು ಸಾಧನವಾಗುವುವು.

ಒಬ್ಬ ಬಂಡವಾಳಗಾರನು ಮತ್ತೊಬ್ಬನನ್ನು ಕೈಗಾರಿಕೆಯ ರಂಗದಿಂದ ಓಡಿಸಿ ಅವನ ಬಂಡವಾಳವನ್ನು ವಶಪಡಿಸಿಕೊಳ್ಳಬೇಕಾದರೆ, ಅವನಿಗಿಂತ ಅಗ್ಗವಾಗಿ ಮಾರಲೇಬೇಕು. ತನಗೆ ನಷ್ಟವಾಗದಂತೆ ಅಗ್ಗವಾಗಿ ಮಾರಬೇಕಾದರೆ, ಅವನು ಅಗ್ಗವಾಗಿ ಉತ್ಪತ್ತಿ ಮಾಡಬೇಕು. ಅದಕ್ಕಾಗಿ ಕೆಲಸದ ಉತ್ಪಾದಕ ಶಕ್ತಿಯನ್ನು ಆದಷ್ಟು ಹೆಚ್ಚಾಗಿ ವೃದ್ಧಿ ಮಾಡಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಕೆಲಸವನ್ನು ಹೆಚ್ಚಾಗಿ ವಿಭಾಗಿಸುವುದರಿಂದ, ಯಂತ್ರೋಪಕರಣಗಳನ್ನು ಇನ್ನೂ ಹೆಚ್ಚು ಸಾರ್ವತ್ರಿಕವಾಗಿ ಉಪಯೋಗಿಸಿ ಅದನ್ನು ಸತತವಾಗಿ ಉತ್ತಮಗೊಳಿಸುವುದರಿಂದ, ಕೆಲಸದ ಉತ್ಪಾದಕ ಶಕ್ತಿಯನ್ನು ಹೆಚ್ಚಿಸಬಹುದು. ಹೆಚ್ಚು ಹೆಚ್ಚು ಕೆಲಸಗಾರರ ಮಧ್ಯೆ ಕೆಲಸವನ್ನು ವಿಭಾಗಿಸಿದಷ್ಟೂ, ಯಂತ್ರೋಪಕರಣಗಳನ್ನು ಭಾರೀ ಪ್ರಮಾಣದಲ್ಲಿ ಉಪಯೋಗಿಸಿದಷ್ಟೂ, ಉತ್ಪತ್ತಿಯ ವೆಚ್ಚವು ಅಷ್ಟರಮಟ್ಟಿಗೆ ಕಮ್ಮಿಯಾಗುವುದು, ಕೆಲಸದ ಪ್ರತಿಫಲವು ಹೆಚ್ಚುವುದು. ಆದುದರಿಂದ, ಯಂತ್ರೋಪಕರಣಗಳನ್ನೂ ಕೆಲಸದ ವಿಭಾಗವನ್ನೂ ಹೆಚ್ಚಿಸಲು ಮತ್ತು ಅವುಗಳಿಂದ ಆದಷ್ಟು ಹೆಚ್ಚು ಪ್ರಮಾಣದಲ್ಲಿ ಉಪಯೋಗ ಪಡೆಯುವುದಕ್ಕೂ ಬಂಡವಾಳಗಾರರ ಮಧ್ಯೆ ಸಾರ್ವತ್ರಿಕವಾದ ಸ್ಪರ್ಧೆಯು ಏರ್ಪಡುವುದು.

ಕೆಲಸದ ಹೆಚ್ಚಿನ ವಿಭಾಗದ ಮೂಲಕ, ಹೊಸ ಯಂತ್ರಗಳನ್ನು ಉಪಯೋಗಿಸಿ ಅವುಗಳನ್ನು ಅಭಿವೃದ್ಧಿಗೊಳಿಸುವುದರ ಮೂಲಕ, ಪ್ರಕೃತಿ ಶಕ್ತಿಗಳನ್ನು ಇನ್ನೂ ಹೆಚ್ಚು ಲಾಭಕರವಾಗಿಯೂ ಮತ್ತು ಹೆಚ್ಚು ಪ್ರಮಾಣದಲ್ಲೂ ಶೋಷಿಸುವುದರ ಮೂಲಕ, ಮೊದಲಿನಷ್ಟೇ ಕೆಲಸದಿಂದ ಅಥವಾ ಶೇಖರವಾಗಿರುವ ಕೆಲಸದಿಂದ ಒಬ್ಬ ಬಂಡವಾಳಗಾರನು ತನ್ನ ಪೈಪೋಟಿಗಾರರಿಗಿಂತ ಹೆಚ್ಚು ಉತ್ಪನ್ನಗಳನ್ನು, ಹೆಚ್ಚು ಮಾರಾಟದ ಪದಾರ್ಥಗಳನ್ನು, ಉತ್ಪತ್ತಿ ಮಾಡುವ ವಿಧಾನವನ್ನು ಕಂಡು ಹಿಡಿದರೆ; ಉದಾಹರಣೆಗೆ, ಅವನ ಪೈಪೋಟಿಗಾರರು ಅರ್ಧ ಗಜ ಬಟ್ಟೆಯನ್ನು ನೇಯುವ ಕೆಲಸದ ಕಾಲದಲ್ಲಿ ಅವನು ಒಂದು ಗಜ ಬಟ್ಟೆಯನ್ನು ಉತ್ಪತ್ತಿ ಮಾಡಬಲ್ಲನಾದರೆ, ಈ ಬಂಡವಾಳಗಾರನು ಯಾವ ರೀತಿ ನಡೆದುಕೊಳ್ಳುತ್ತಾನೆ?

ಅರ್ಧ ಗಜ ಬಟ್ಟೆಯನ್ನು ಹಳೆಯ ಮಾರಾಟದ ಬೆಲೆಗೆ ಈಗಲೂ ಕೂಡ ಅವನು ಮಾರಬಹುದು; ಆದರೆ ಇದರಿಂದ ಅವನ ವಿರೋಧಿಗಳನ್ನು ಓಡಿಸಿ ತನ್ನ ಮಾರಾಟವನ್ನು ಹೆಚ್ಚಿಸಿ ಕೊಳ್ಳುವುದಕ್ಕಾಗುವುದಿಲ್ಲ. ಆದರೆ ಎಷ್ಟರ ಮಟ್ಟಿಗೆ

ಅವನ ಉತ್ಪತ್ತಿಯು ಹೆಚ್ಚಿದೆಯೋ, ಅಷ್ಟರ ಮಟ್ಟಿಗೆ ಅವನು ತನ್ನ ಮಾರಾಟವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಅವನು ಉಪಯೋಗಿಸಿರುವ ಹೆಚ್ಚು ಪ್ರಬಲವಾದ ಮತ್ತು ಹೆಚ್ಚು ಬೆಲೆಬಾಳುವ ಉತ್ಪತ್ತಿ ಸಾಧನಗಳು ಅವನ ಪದಾರ್ಥಗಳನ್ನು ಮಾರು ವಂತೆ, ತನ್ನ ಪದಾರ್ಥಗಳಿಗೆ ಇನ್ನೂ ದೊಡ್ಡ ಮಾರುಕಟ್ಟೆ (ಮಾರ್ಕೆಟ್) ಸಂಪಾದಿ ಸುವಂತೆ ಅವು ಅವನನ್ನು ಒತ್ತಾಯ ಪಡಿಸುತ್ತವೆ; ಇದರ ಪರಿಣಾಮವಾಗಿ ನಮ್ಮ ಬಂಡವಾಳಗಾರನು ತನ್ನ ಅರ್ಧ ಗಜ ಬಟ್ಟೆಯನ್ನು ತನ್ನ ಪೈಪೋಟಿಗಾರರಿಗಿಂತ ಕಮ್ಮಿ ಬೆಲೆಗೆ ಮಾರುತ್ತಾನೆ.

ಆದರೆ, ಇತರರಿಗೆ ಅರ್ಧ ಗಜ ಬಟ್ಟೆ ತಯಾರಿಸಲು ಆಗುವ ವೆಚ್ಚಕ್ಕೆ ನಮ್ಮ ಬಂಡವಾಳಗಾರನು ಒಂದು ಗಜ ಬಟ್ಟೆಯನ್ನು ಉತ್ಪತ್ತಿ ಮಾಡಿದ್ದರೂ ಕೂಡ, ಅವನ ಪೈಪೋಟಿಗಾರರು ಅರ್ಧ ಗಜವನ್ನು ಮಾರುವ ಹಣಕ್ಕೆ ನಮ್ಮ ಬಂಡವಾಳಗಾರನು ತನ್ನ ಒಂದು ಗಜವನ್ನು ಮಾರುವುದಿಲ್ಲ. ಹಾಗೇನಾದರೂ ಮಾರಿದ ಪಕ್ಷಕ್ಕೆ ಅವನಿಗೆ ಹೆಚ್ಚಿಗೆ ಲಾಭ ದೊರೆಯುವುದಿಲ್ಲ, ತನ್ನ ಉತ್ಪತ್ತಿಯ ವೆಚ್ಚ ಮಾತ್ರ ವಾಪಸು ಬರುತ್ತದೆ. ಅವನಿಗೇನಾದರೂ ಒಂದು ವೇಳೆ ಹೆಚ್ಚಿಗೆ ವರಮಾನ ಬಂದರೆ, ಅದಕ್ಕೆ ಕಾರಣವಾದರೂ ಅವನು ಉಪಯೋಗಿಸಿರುವ ಹೆಚ್ಚಿಗೇ ಬಂಡವಾಳವೇ ಹೊರತು, ಇತರರಿಗಿಂತ ಅವನು ತನ್ನ ಬಂಡವಾಳವನ್ನು ಇನ್ನೂ ಚೆನ್ನಾಗಿ ಉಪ ಯೋಗಿಸಿಕೊಂಡಿದ್ದರಿಂದಲ್ಲ. ಅಲ್ಲದೆ, ತನ್ನ ಪದಾರ್ಥಗಳ ಬೆಲೆಯನ್ನು ತನ್ನ ಪೈಪೋಟಿಗಾರರಿಗಿಂತ ಸ್ವಲ್ಪವೇ ಕಮ್ಮಿ ಮಾಡಿದರೂ ಕೂಡ ಅವನ ಉದ್ದೇಶಸಾಧನೆ ಆಗುತ್ತದೆ. ಅವರಿಗಿಂತ ಅಗ್ಗವಾಗಿ ಮಾರುವುದರಿಂದ, ಅವರನ್ನು ವ್ಯಾಪಾರ ಕ್ಷೇತ್ರದಿಂದ ಓಡಿಸುತ್ತಾನೆ, ಕೊನೆಯಪಕ್ಷ ಅವರ ಮಾರಾಟದ ಒಂದು ಭಾಗವನ್ನಾ ದರೂ ಕಿತ್ತುಕೊಳ್ಳುತ್ತಾನೆ. ಕೊನೆಯದಾಗಿ, ಪದಾರ್ಥದ ಮಾರಾಟವು ಕೈಗಾರಿಕೆಗೆ ಅನುಕೂಲವಾದ ಕಾಲದಲ್ಲಿ ನಡೆಯುತ್ತದೆಯೋ ಅಥವಾ ಅನಾನುಕೂಲವಾದ ಕಾಲದಲ್ಲಿ ನಡೆಯುತ್ತಿದೆಯೋ ಅದಕ್ಕೆ ತಕ್ಕಂತೆ ಅದರ ತತ್ಕಾಲದ ಬೆಲೆಯು ಯಾವಾಗಲೂ ಅದರ ಉತ್ಪತ್ತಿಯ ವೆಚ್ಚಕ್ಕಿಂತ ಹೆಚ್ಚಾಗಿಯೋ ಅಥವಾ ಕಮ್ಮಿಯಾಗಿಯೋ ಇರುವುದೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಒಂದು ಗಜ ಬಟ್ಟೆಯ ಮಾರುಕಟ್ಟೆಯ ಬೆಲೆಯು ಅದರ ಮಾಮೂಲೀ ಉತ್ಪತ್ತಿ ವೆಚ್ಚಕ್ಕಿಂತ ಮೇಲಿದೆಯೋ ಅಥವಾ ಕೆಳಗಿದೆಯೋ ಅದಕ್ಕೆ ತಕ್ಕಂತೆ ಹೊಸದಾದ ಮತ್ತು

ಹೆಚ್ಚು ಫಲದಾಯಕವಾದ ಉತ್ಪತ್ತಿ ಸಾಧನಗಳನ್ನು ಉಪಯೋಗಿಸಿರುವ ಬಂಡವಾಳಗಾರನ ನಿಜವಾದ ಉತ್ಪತ್ತಿಯ ವೆಚ್ಚಕ್ಕೂ ಅವನು ಮಾರುವ ಬೆಲೆಗೂ ಇರುವ ವ್ಯತ್ಯಾಸವು ಬದಲಾವಣೆ ಹೊಂದುತ್ತದೆ.

ಏನೇ ಆಗಲಿ, ಈ ವಿಶೇಷ ಅನುಕೂಲವನ್ನು ನಮ್ಮ ಬಂಡವಾಳಗಾರನು ಬಹಳ ಕಾಲ ಅನುಭವಿಸುವಂತಿಲ್ಲ; ಪೈಪೋಟಿ ಮಾಡುತ್ತಿರುವ ಇತರ ಬಂಡವಾಳಗಾರರೂ ಕೂಡ ಅದೇ ಯಂತ್ರಗಳನ್ನು, ಅದೇ ಕೆಲಸದ ವಿಭಾಗವನ್ನು, ಅದೇ ಪ್ರಮಾಣದಲ್ಲೋ ಅಥವಾ ಇನ್ನೂ ಭಾರೀ ಪ್ರಮಾಣದಲ್ಲೋ ಆಚರಣೆಗೆ ತರುತ್ತಾರೆ. ಕೊನೆಗೆ ಈ ಆಚರಣೆಯು ಎಷ್ಟು ಸಾರ್ವತ್ರಿಕವಾಗುತ್ತದೆಂದರೆ, ಬಟ್ಟೆಯ ಬೆಲೆಯು ಅದರ ಹಳೆಯ ಉತ್ಪತ್ತಿಯ ವೆಚ್ಚಕ್ಕಿಂತ ಕಮ್ಮಿಯಾಗುವುದು ಮಾತ್ರವಲ್ಲ, ಅದರ ಹೊಸ ಉತ್ಪತ್ತಿಯ ವೆಚ್ಚಕ್ಕಿಂತಲೂ ಕೂಡ ಕಮ್ಮಿಯಾಗುವುದು.

ಆದುದರಿಂದ, ಹೊಸ ಉತ್ಪತ್ತಿ ಸಾಧನಗಳ ಉಪಯೋಗಕ್ಕೆ ಮುಂಚೆ ಬಂಡವಾಳಗಾರರ ಪರಸ್ಪರ ಪರಿಸ್ಥಿತಿಯು ಹೇಗಿದ್ದಿತೋ ಈಗಲೂ ಕೂಡ ಹಾಗೆಯೇ ಇರುತ್ತದೆ. ಅಲ್ಲದೆ ಈ ಹೊಸ ಸಾಧನಗಳಿಂದಾಗಿ, ಅದೇ ಬೆಲೆಗೆ ಎರಡರಷ್ಟು ಪದಾರ್ಥವನ್ನು ಮಾರಲು ಅವರಿಗೆ ಸಾಧ್ಯವಾದರೆ, ಈ ಎರಡರಷ್ಟು ಪದಾರ್ಥವನ್ನು ಹಳೆಯ ಬೆಲೆಗಿಂತ ಕಮ್ಮಿಯಾದ ಬೆಲೆಗೆ ಅವರು ಮಾರಲೇ ಬೇಕಾಗಿದೆ. ಈ ಹೊಸ ಉತ್ಪತ್ತಿಯ ವೆಚ್ಚದ ಆಧಾರದ ಮೇಲೆ ಮತ್ತೆ ಅದೇ ಆಟವು ಪ್ರಾರಂಭವಾಗುವುದು. ಕೆಲಸದ ಹೆಚ್ಚಿಗೆ ವಿಭಾಗ, ಹೆಚ್ಚಿಗೆ ಯಂತ್ರಗಳು, ಯಂತ್ರವನ್ನೂ ಮತ್ತು ಕೆಲಸದ ವಿಭಾಗವನ್ನೂ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳುವುದು. ಈ ಪರಿಣಾಮದ ವಿರೋಧವಾಗಿ ಮೊದಲಿನ ಪ್ರತಿ—ಆಚರಣೆಯನ್ನೇ ಪೈಪೋಟಿಯು ಮತ್ತೆ ತರುತ್ತದೆ.

ಉತ್ಪತ್ತಿಯ ವಿಧಾನದಲ್ಲಿ ಮತ್ತು ಉತ್ಪತ್ತಿಯ ಸಾಧನಗಳಲ್ಲಿ ಸತತವಾಗಿ ಈ ರೀತಿ ಪರಿವರ್ತನೆಗಳೂ, ಕ್ರಾಂತಿಕಾರಿ ಬದಲಾವಣೆಗಳೂ ಹೇಗೆ ಆಗುತ್ತವೆಂಬುದನ್ನು ಕಾಣುತ್ತೇವೆ. ಕೆಲಸದ ವಿಭಾಗವು ಅವಶ್ಯಕವಾಗಿಯೇ ಹೆಚ್ಚಿನ ಕೆಲಸದ ವಿಭಾಗಕ್ಕೆ ಹೇಗೆ ದಾರಿ ಮಾಡಿಕೊಡುವುದೆಂಬುದನ್ನು, ಯಂತ್ರೋಪಕರಣದ ಉಪಯೋಗವು ಹೆಚ್ಚಿನ ಯಂತ್ರೋಪಕರಣದ ಉಪಯೋಗಕ್ಕೆ ಹೇಗೆ ದಾರಿ ಮಾಡಿಕೊಡುವು

ದೆಂಬುದನ್ನು, ಭಾರೀ ಪ್ರಮಾಣದಲ್ಲಿ ನಡೆಯುವ ಕೆಲಸವು ಇನ್ನೂ ಭಾರೀ ಪ್ರಮಾಣದ ಕೆಲಸಕ್ಕೆ ಹೇಗೆ ದಾರಿ ಮಾಡಿಕೊಡುವುದೆಂಬುದನ್ನು ನಾವು ಕಾಣುತ್ತೇವೆ.

ಬೂರ್ಜ್ವಾ (ಬಂಡವಾಳಗಾರ) ಉತ್ಪತ್ತಿಯನ್ನು ಅದರ ಹಳೆಯ ವ್ಯವಸ್ಥೆಯಿಂದ ಪದೇ ಪದೇ ಕಿತ್ತೊಗೆಯುವ ನಿಯಮವು ಇದು. ಬಂಡವಾಳವು ಕೆಲಸದ ಉತ್ಪಾದಕ ಶಕ್ತಿಗಳನ್ನು ತೀವ್ರಗೊಳಿಸಲು ಪ್ರಾರಂಭ ಮಾಡಿದ್ದರಿಂದ, ಅದು ಮತ್ತೆ ಮತ್ತೆ ಉತ್ಪಾದಕ ಶಕ್ತಿಗಳನ್ನು ತೀವ್ರಗೊಳಿಸುವಂತೆ ಈ ನಿಯಮವು ಒತ್ತಾಯ ಪಡಿಸುತ್ತದೆ. ಬಂಡವಾಳಕ್ಕೆ ಸ್ವಲ್ಪವೂ ವಿರಾಮ ಕೊಡದೆ, ಅದರ ಕಿವಿಯಲ್ಲಿ "ಮುಂದೆ ನಡೆ! ಮುಂದೆ ನಡೆ!" ಎಂದು ಸತತವಾಗಿ ಪಿಸುಗುಟ್ಟುತ್ತಲೇ ಇರುವ ನಿಯಮವಿದು.

ವ್ಯಾಪಾರದ ಏರಿಳಿತಗಳೊಳಗೆ, ಪದಾರ್ಥದ ಬೆಲೆಯನ್ನು ಅದರ ಉತ್ಪತ್ತಿಯ ವೆಚ್ಚಕ್ಕೆ ಅವಶ್ಯಕವಾಗಿ ಸಮನಾಗಿ ಮಾಡುವಂತಹ ನಿಯಮವೇ ಇದು.

ಬಂಡವಾಳಗಾರನು ಎಷ್ಟೇ ಪ್ರಬಲವಾದ ಉತ್ಪತ್ತಿ ಸಾಧನಗಳನ್ನು ಕೈಗಾರಿಕಾ ರಂಗಕ್ಕೆ ತರಲಿ, ಪೈಪೋಟಿಯಿಂದ ಈ ಉತ್ಪತ್ತಿ ಸಾಧನಗಳು ಸಾರ್ವತ್ರಿಕವಾಗುವುವು. ಅವುಗಳು ಸಾರ್ವತ್ರಿಕವಾದ ಕ್ಷಣದಿಂದ, ಅವನ ಬಂಡವಾಳದ ಹೆಚ್ಚಿನ ಫಲಕಾರಿ ಶಕ್ತಿಯ ಏಕೈಕ ಪರಿಣಾಮ ಯಾವುದೆಂದರೆ, ಬಂಡವಾಳಗಾರನು ಅದೇ ಬೆಲೆಗೆ ಮೊದಲಿಗಿಂತ ಹತ್ತು ಪಾಲು, ಇಪ್ಪತ್ತು ಪಾಲು, ನೂರು ಪಾಲು ಹೆಚ್ಚಾಗಿ ಪದಾರ್ಥಗಳನ್ನು ಸರಬರಾಜು ಮಾಡಬೇಕಾಗುವುದು. ಮೊದಲಿಗಿಂತ ಕಮ್ಮಿ ಬೆಲೆಯನ್ನು ತರುವ ತನ್ನ ಪದಾರ್ಥದಿಂದ ನಷ್ಟ ಹೊಂದದಿರಬೇಕಾದರೆ ಪ್ರಾಯಶಃ ಸಾವಿರಪಾಲು ಹೆಚ್ಚಾಗಿ ಅವುಗಳನ್ನು ಮಾರಾಟ ಮಾಡಬೇಕಾಗುವುದು. ಅಲ್ಲದೆ ಲಾಭ ಪಡೆಯುವುದಕ್ಕೆ ಮಾತ್ರವೇ ಅಲ್ಲ, ತನ್ನ ಉತ್ಪತ್ತಿಯ ವೆಚ್ಚವನ್ನು ವಾಪಸು ಪಡೆಯುವುದಕ್ಕೆ ಕೂಡ—ಉತ್ಪತ್ತಿಯ ಸಲಕರಣೆಗಳ ಬೆಲೆ ಏರುತ್ತಾ ಹೋಗುವುದರಿಂದ—ಈಗ ಇನ್ನೂ ವಿಸ್ತಾರವಾದ ಮಾರಾಟವು ಅವಶ್ಯಕವಾಗುತ್ತದೆ. ಈ ವಿಸ್ತಾರವಾದ ಮಾರಾಟವು ಅವನಿಗೆ ಮಾತ್ರವಲ್ಲದೆ ಅವನ ಪೈಪೋಟಿಗಾರರಿಗೆ ಕೂಡ ಉಳಿಯುವ ಅಥವಾ ಅಳಿಯುವ ಪ್ರಶ್ನೆಯಾಗುವುದರಿಂದ, ಆಗಲೇ ಕಂಡುಹಿಡಿಯಲ್ಪಟ್ಟಿರುವ ಉತ್ಪತ್ತಿ ಸಾಧನಗಳು ಹೆಚ್ಚು ಫಲದಾಯಕವಾದಷ್ಟೂ ಹಳೆಯ ಹೋರಾಟವು ಅಷ್ಟು ಬಿರುಸಾಗಿ ಮತ್ತೆ ಪ್ರಾರಂಭವಾಗುವುದು. ಆದುದರಿಂದ

ಕೆಲಸದ ವಿಭಾಗವೂ ಯಂತ್ರೋಪಕರಣಗಳ ಉಪಯೋಗವೂ ಮೊದಲಿಗಿಂತಲೂ ಭಾರೀ ಪ್ರಮಾಣದಲ್ಲಿ ಮುಂದುವರಿಯುವುದು.

ಬಂಡವಾಳವು ಉಪಯೋಗಿಸುವಂತಹ ಉತ್ಪತ್ತಿ ಸಾಧನಗಳ ಶಕ್ತಿ ಏನೇ ಇರಲಿ, ಈ ಶಕ್ತಿಯು ಕೊಡುವಂತಹ ಸ್ವರ್ಣಫಲವು ಬಂಡವಾಳದ ಕೈ ಸೇರದಂತೆ ಮಾಡುವ ಪ್ರಭಾವವನ್ನು ಪೈಪೋಟಿ ಹೊಂದಿದೆ. ಏಕೆಂದರೆ ಪೈಪೋಟಿಯು ಪದಾರ್ಥಗಳ ಬೆಲೆಯನ್ನು ಉತ್ಪತ್ತಿಯ ವೆಚ್ಚದ ಮಟ್ಟಕ್ಕೆ ಹಿಂತರುತ್ತದೆ. ಆದುದ ರಿಂದ ಉತ್ಪತ್ತಿ ಅಗ್ಗವಾದಷ್ಟೂ, ಅಂದರೆ ಅದೇ ಕೆಲಸದ ಪರಿಮಾಣದಿಂದ ಹೆಚ್ಚು ಪದಾರ್ಥಗಳು ಉತ್ಪತ್ತಿಯಾದಷ್ಟೂ, ಉತ್ಪತ್ತಿಯು ಮತ್ತಷ್ಟು ಅಗ್ಗವಾಗುವಂತೆ, ಅದೇ ಹಣಕ್ಕೆ ಹೆಚ್ಚು ಹೆಚ್ಚು ಪದಾರ್ಥಗಳನ್ನು ಸರಬರಾಜು ಮಾಡುವಂತೆ ಪೈಪೋಟಿಯು ಬಂಡವಾಳಗಾರನನ್ನು ಒತ್ತಾಯ ಪಡಿಸುತ್ತದೆ. ಈ ರೀತಿಯಲ್ಲಿ ತನ್ನ ಸ್ವಂತ ಪ್ರಯತ್ನಗಳಿಂದ ಬಂಡವಾಳಗಾರನು ಹೆಚ್ಚಿಗೆ ಏನನ್ನೂ ಸಂಪಾದಿಸ ಲಾರದವನಾಗುತ್ತಾನೆ; ಅದೇ ಕೆಲಸದ ಕಾಲದಲ್ಲಿ ಮೊದಲಿಗಿಂತ ಹೆಚ್ಚಾಗಿ ಸರಬ ರಾಜು ಮಾಡುವ ಹೊರೆಯನ್ನು ಹೊತ್ತುಕೊಳ್ಳುತ್ತಾನೆ. ಒಂದೇ ಮಾತಿನಲ್ಲಿ, ತನ್ನ ಬಂಡವಾಳವನ್ನು ಲಾಭದಾಯಕವಾಗಿ ಉಪಯೋಗಿಸುವುದಕ್ಕೆ ಅವನಿಗೆ ಇನ್ನೂ ಹೆಚ್ಚು ಕಷ್ಟ ಸ್ಥಿತಿಗತಿಗಳು ಒದಗುತ್ತವೆ. ಆದುದರಿಂದ ಪೈಪೋಟಿಯು ತನ್ನ ಉತ್ಪತ್ತಿಯ ವೆಚ್ಚದ ನಿಯಮದ ಆಯುಧವನ್ನು ಹಿಡಿದುಕೊಂಡು ಬಂಡ ವಾಳಗಾರನನ್ನು ಸತತವಾಗಿ ಓಡಿಸಿಕೊಂಡು ಹೋಗುತ್ತಿದ್ದರೆ, ಮತ್ತು ತನ್ನ ಪೈಪೋಟಿಗಾರರ ವಿರೋಧವಾಗಿ ಅವನು ರೂಪಿಸುವ ಪ್ರತಿಯೊಂದು ಆಯುಧವೂ ಅವನ ಮೇಲೆಯೇ ತಿರುಗುವುದಾದರೂ, ಪೈಪೋಟಿಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಬಂಡವಾಳಗಾರನು ಸತತವಾಗಿ ಪ್ರಯತ್ನಿಸುತ್ತಾನೆ. ಅದಕ್ಕಾಗಿ ಹೆಚ್ಚು ಬೆಲೆ ಬಾಳಿದರೂ, ಹೆಚ್ಚು ಅಗ್ಗವಾಗಿ ಉತ್ಪತ್ತಿ ಮಾಡುವಂತಹ, ಹೊಸ ಯಂತ್ರ ಗಳನ್ನೂ, ಹಳೆಯ ಕೆಲಸದ ವಿಭಾಗದ ಜಾಗದಲ್ಲಿ ಹೊಸ ಕೆಲಸದ ವಿಭಾಗವನ್ನೂ, ಸದಾ ಆಚರಣೆಗೆ ತರುತ್ತಲೇ ಇರುತ್ತಾನೆ. ತನ್ನ ಹೊಸ ಯಂತ್ರಗಳನ್ನೂ ಮತ್ತು ಹೊಸ ಕೆಲಸದ ವಿಭಾಗವನ್ನೂ ಪೈಪೋಟಿಯು ಹಳೆಯದಾಗಿ ಮಾಡುವುದಕ್ಕೆ ಕಾಯದೆ ಅದಕ್ಕೆ ಮುಂಚೆಯೇ ಇನ್ನೂ ಹೊಸ ಯಂತ್ರಗಳನ್ನೂ, ಕೆಲಸದ ವಿಭಾಗ ವನ್ನೂ ರೂಢಿಗೆ ತರುತ್ತಾನೆ.

ಇಡೀ ಪ್ರಪಂಚದ ಮಾರುಕಟ್ಟೆಯಲ್ಲಿ ನಡೆಯುತ್ತಿರುವ ಈ ಉದ್ರಿಕ್ತ ಚಳುವಳಿಯನ್ನು ನಮ್ಮ ಮನಸ್ಸಿನಲ್ಲಿ ಚಿತ್ರಿಸಿಕೊಂಡರೆ, ಬಂಡವಾಳದ ಬೆಳವಣಿಗೆ, ಶೇಖರಣೆ ಮತ್ತು ಕೇಂದ್ರೀಕರಣಗಳ ಪರಿಣಾಮವಾಗಿ, ಹೇಗೆ ಕೆಲಸದ ವಿಭಾಗವು ವಿರಾಮವಿಲ್ಲದೆ ಹೆಚ್ಚುತ್ತಾ ಹೋಗುವುದೆಂಬುದನ್ನೂ, ಹೊಸ ಯಂತ್ರೋಪಕರಣದ ಉಪಯೋಗವೂ ಹಳೆಯ ಯಂತ್ರೋಪಕರಣಗಳನ್ನು ಉತ್ತಮಗೊಳಿಸುವುದೂ, ಹೆಚ್ಚು ಹೆಚ್ಚು ಭಾರೀ ಪ್ರಮಾಣದಲ್ಲಿ ಹೇಗೆ ಉದ್ವೇಗಪೂರ್ವಕವಾಗಿ ನಡೆಯುತ್ತವೆಂಬುದನ್ನೂ ನಾವು ಅರ್ಥಮಾಡಿಕೊಳ್ಳಬಹುದು.

ಆದರೆ ಉತ್ಪತ್ತಿದಾಯಕ ಬಂಡವಾಳದ ಬೆಳವಣಿಗೆಯಿಂದ ಬೇರ್ಪಡಿಸಲಾಗದಂತಹ ಈ ಸಂದರ್ಭಗಳು ಕೂಲಿಯ ನಿರ್ಧಾರದ ಮೇಲೆ ಯಾವ ಪರಿಣಾಮವನ್ನುಂಟುಮಾಡುತ್ತವೆ?

ಹೆಚ್ಚಿನ ಕೆಲಸದ ವಿಭಾಗದಿಂದ ಒಬ್ಬ ಕೆಲಸಗಾರನು ಐದು ಮಂದಿಯ, ಹತ್ತು ಮಂದಿಯ ಅಥವಾ ಇಪ್ಪತ್ತು ಮಂದಿಯ ಕೆಲಸವನ್ನು ಮಾಡುವುದು ಸಾಧ್ಯವಾಗುತ್ತದೆ; ಆದುದರಿಂದ ಅದು ಕೆಲಸಗಾರರ ನಡುವೆ ಪೈಪೋಟಿಯನ್ನು ಐದು ಪಾಲು, ಹತ್ತು ಪಾಲು ಅಥವಾ ಇಪ್ಪತ್ತು ಪಾಲು ಹೆಚ್ಚಿಸುತ್ತದೆ. ಒಬ್ಬನು ಮತ್ತೊಬ್ಬನಿಗಿಂತ ಅಗ್ಗವಾಗಿ ಮಾರಿಕೊಳ್ಳುವುದರ ಮೂಲಕ ಮಾತ್ರವೇ ಕೆಲಸಗಾರರು ತಮ್ಮತಮ್ಮಲ್ಲೇ ಪೈಪೋಟಿ ನಡೆಸುವುದಿಲ್ಲ; ಒಬ್ಬನು ಐವರ, ಹತ್ತು ಜನರ, ಇಪ್ಪತ್ತು ಜನರ ಕೆಲಸವನ್ನು ಮಾಡುವುದರ ಮೂಲಕ, ಅವರು ಪೈಪೋಟಿ ನಡೆಸುತ್ತಾರೆ. ಬಂಡವಾಳದಿಂದ ಜಾರಿಗೆ ತರಲ್ಪಟ್ಟು ಸತತವಾಗಿ ಅಧಿಕವಾಗುವ ಕೆಲಸದ ವಿಭಾಗವು, ಕೆಲಸಗಾರರನ್ನು ಈ ರೀತಿ ತಮ್ಮ ತಮ್ಮಲ್ಲೇ ಪೈಪೋಟಿ ನಡೆಸುವಂತೆ ಒತ್ತಾಯಪಡಿಸುತ್ತದೆ. ಅಲ್ಲದೆ ಕೆಲಸದ ವಿಭಾಗವು ಯಾವ ಪ್ರಮಾಣದಲ್ಲಿ ಅಧಿಕವಾಗುವುದೋ ಅದೇ ಪ್ರಮಾಣದಲ್ಲಿ ಕೆಲಸವೂ ಕೂಡ ಸರಳವಾಗುವುದು. ಕೆಲಸಗಾರನ ವಿಶೇಷ ಕೌಶಲ್ಯವು ನಿಷ್ಪ್ರಯೋಜಕವಾಗುತ್ತದೆ ತನ್ನ ದೈಹಿಕ ಅಥವಾ ಬೌದ್ಧಿಕ ಶಕ್ತಿಯನ್ನು ತೀವ್ರವಾಗಿ ಉಪಯೋಗಿಸುವ ಅಗತ್ಯವಿಲ್ಲದ, ಸಾಮಾನ್ಯವಾದ ಏಕಪ್ರಕಾರದ ಉತ್ಪತ್ತಿದಾಯಕ ಶಕ್ತಿಯಾಗಿ ಕೆಲಸಗಾರನು ಪರಿವರ್ತನೆ ಹೊಂದುತ್ತಾನೆ. ಅವನು ಮಾಡುವಂತಹ ಕೆಲಸವನ್ನು ಯಾರು ಬೇಕಾದರೂ ಮಾಡಬಹುದು. ಆದುದರಿಂದ ಎಲ್ಲಾ ಕಡೆಯಿಂದಲೂ ಪೈಪೋಟಿಗಾರರು ಅವನನ್ನು

ಮುತ್ತಿಕೊಳ್ಳುತ್ತಾರೆ. ಅಲ್ಲದೆ ಕೆಲಸವು ಸರಳವಾದಷ್ಟೂ ಮತ್ತು ಕಲಿಯಲು ಸುಲಭವಾದಷ್ಟೂ, ಅದರಲ್ಲಿ ಪರಿಶ್ರಮಹೊಂದುವುದಕ್ಕೆ ಬೇಕಾದ ವೆಚ್ಚವೂ ಕಮ್ಮಿಯಾಗುತ್ತದೆ. ಇದರಿಂದ ಕೂಲಿಯೂ ಕಮ್ಮಿಯಾಗುತ್ತದೆ; ಏಕೆಂದರೆ ಪ್ರತಿಯೊಂದು ಪದಾರ್ಥದ ಬೆಲೆಯಂತೆ, ಅದೂ ಕೂಡ ಉತ್ಪತ್ತಿಯ ವೆಚ್ಚದಿಂದ ನಿರ್ಧಾರವಾಗುತ್ತದೆ.

ಆದುದರಿಂದ ಯಾವ ಪ್ರಮಾಣದಲ್ಲಿ ಕೆಲಸವು ಹೆಚ್ಚು ಅತೃಪ್ತಿಕರವಾಗಿಯೂ ಹೆಚ್ಚು ಅಸಹ್ಯವಾಗಿಯೂ ಆಗುವುದೋ ಅದೇ ಪ್ರಮಾಣದಲ್ಲಿ ಪೈಪೋಟಿಯು ಹೆಚ್ಚುವುದು ಮತ್ತು ಕೂಲಿಯು ಕಮ್ಮಿಯಾಗುವುದು. ತನ್ನ ಕೂಲಿಯ ಮೊಬಲಗನ್ನು ಮೊದಲಿನಷ್ಟೇ ಉಳಿಸಿಕೊಳ್ಳಲು ಹೆಚ್ಚು ಕಾಲ ಕೆಲಸ ಮಾಡುವುದರ ಮೂಲಕವೋ ಅಥವಾ ಅದೇ ಕಾಲದಲ್ಲಿ ಹೆಚ್ಚು ಉತ್ಪತ್ತಿ ಮಾಡುವುದರ ಮೂಲಕವೋ, ಕೆಲಸಗಾರನು ಹೆಚ್ಚು ಕೆಲಸವನ್ನು ಮಾಡುತ್ತಾನೆ. ಆದುದರಿಂದ ಬಡತನದಿಂದ ದೂಡಲ್ಪಟ್ಟು, ಕೆಲಸದ ವಿಭಾಗದ ಕೆಟ್ಟ ಪರಿಣಾಮಗಳನ್ನು ಕೆಲಸಗಾರನು ಮತ್ತಷ್ಟು ಹೆಚ್ಚಿಸುತ್ತಾನೆ. ಇದರ ಪರಿಣಾಮವಾಗಿ, ಅವನು ಹೆಚ್ಚು ಕೆಲಸ ಮಾಡಿದಷ್ಟೂ ಅವನಿಗೆ ಕಮ್ಮಿ ಕೂಲಿ ಸಿಕ್ಕುತ್ತದೆ; ಏಕೆಂದರೆ ಅವನು ಹೆಚ್ಚು ಕೆಲಸ ಮಾಡುವಷ್ಟರಮಟ್ಟಿಗೆ ತನ್ನ ಜೊತೆಗಾರರಾದ ಕೆಲಸಗಾರರ ವಿರೋಧ ಪೈಪೋಟಿ ನಡೆಸುತ್ತಾನೆ. ಆದುದರಿಂದ ಅವನಂತೆಯೇ ಅದೇ ಕೆಟ್ಟ ಷರತ್ತುಗಳಿಗೆ ಕೆಲಸ ಮಾಡಲು ಸಿದ್ಧವಾಗಿರುವ ಪೈಪೋಟಿಗಾರರನ್ನಾಗಿ ತನ್ನ ಜೊತೆಗಾರ ಕೆಲಸಗಾರರನ್ನು ಪರಿವರ್ತಿಸುತ್ತಾನೆ. ಹೀಗಾಗಿ ಕೊನೆಗೆ ತನ್ನ ವಿರೋಧವಾಗಿಯೇ, ಕೂಲಿಗಾರ ವರ್ಗದ ಸದಸ್ಯನಾಗಿರುವ ತನ್ನ ವಿರೋಧವಾಗಿಯೇ, ಅವನು ಪೈಪೋಟಿ ನಡೆಸಿದಂತಾಗುತ್ತದೆ.

ಕುಶಲ ಕೆಲಸಗಾರರಿಗೆ ಬದಲಾಗಿ ಸಾಧಾರಣ ಕೆಲಸಗಾರರನ್ನು ಉಪಯೋಗಿಸುವುದರ ಮೂಲಕ, ಗಂಡಸರಿಗೆ ಬದಲಾಗಿ ಹೆಂಗಸರನ್ನು ಉಪಯೋಗಿಸುವುದರ ಮೂಲಕ, ದೊಡ್ಡವರಿಗೆ ಬದಲಾಗಿ ಮಕ್ಕಳನ್ನು ಉಪಯೋಗಿಸುವುದರ ಮೂಲಕ, ಯಂತ್ರೋಪಕರಣವು ಇದೇ ಪರಿಣಾಮಗಳನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಉಂಟುಮಾಡುವುದು. ಹೊಸದಾಗಿ ಆಚರಣೆಗೆ ತಂದಾಗ, ಯಂತ್ರೋಪಕರಣವು ಕೈ ಕೆಲಸಗಾರರನ್ನು ಗುಂಪು ಗುಂಪಾಗಿ ಬೀದಿಗೆ ತಳ್ಳುವುದರ ಮೂಲಕವೂ, ಅದು

ಜೆಳವಣಿಗೆ ಹೊಂದಿದಾಗ, ಉತ್ತಮಪಡಿಸಲ್ಪಟ್ಟಾಗ ಮತ್ತು ಹೆಚ್ಚಿನ ಉತ್ಪತ್ತಿದಾಯಕ ಯಂತ್ರೋಪಕರಣದಿಂದ ಬದಲಾಯಿಸಲ್ಪಟ್ಟಾಗ ಕೆಲಸಗಾರರನ್ನು ಸಣ್ಣ ಸಣ್ಣ ತಂಡಗಳಲ್ಲಿ ವಜಾ ಮಾಡುವುದರ ಮೂಲಕವೂ, ಯಂತ್ರೋಪಕರಣವು ಮೇಲೆ ಹೇಳಿದ ಪರಿಣಾಮಗಳನ್ನು ಉಂಟುಮಾಡುತ್ತದೆ. ಬಂಡವಾಳಗಾರರು ತಮ್ಮ ತಮ್ಮಲ್ಲೇ ನಡೆಸುವ ಕೈಗಾರಿಕಾ ಯುದ್ಧವನ್ನು ಸ್ಥೂಲವಾಗಿ ಮೇಲೆ ಚಿತ್ರಿಸಿದ್ದೇವೆ. ಈ ಯುದ್ಧವು ವಿಚಿತ್ರವಾದುದು; ಕೆಲಸಗಾರರ ಸೈನ್ಯಕ್ಕೆ ಹೆಚ್ಚು ಮಂದಿಯನ್ನು ಸೇರಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಆ ಸೈನ್ಯದಿಂದ ಸೈನಿಕರನ್ನು ವಜಾ ಮಾಡುವುದರಿಂದ ಈ ಯುದ್ಧದ ಕದನಗಳಲ್ಲಿ ಬಂಡವಾಳಗಾರರು ಜಯವನ್ನು ಸಂಪಾದಿಸುವರು. ಕೈಗಾರಿಕೆಯ ಸೈನಿಕರನ್ನು ಯಾರು ಹೆಚ್ಚು ಸಂಖ್ಯೆಯಲ್ಲಿ ವಜಾ ಮಾಡಬಲ್ಲರು ಎಂದು ಸೈನ್ಯಾಧಿಕಾರಿಗಳಾದ ಬಂಡವಾಳಗಾರರು ತಮ್ಮೊಳಗೆ ಪೈಪೋಟಿ ನಡೆಸುತ್ತಾರೆ.

ಯಂತ್ರೋಪಕರಣದಿಂದ ಕೆಲಸ ಕಳೆದುಕೊಂಡ ಕೆಲಸಗಾರರು ಹೊಸ ಶಾಖೆಗಳಲ್ಲಿ ಕೆಲಸವನ್ನು ಪಡೆಯುತ್ತಾರೆಂದು ಅರ್ಥ ಶಾಸ್ತ್ರಜ್ಞರೇನೋ ನಮಗೆ ಹೇಳುತ್ತಾರೆ.

ಆದರೆ ಕೆಲಸ ಕಳೆದುಕೊಳ್ಳುವ ಅದೇ ಕೆಲಸಗಾರರಿಗೆ ಕೆಲಸದ ಹೊಸ ಶಾಖೆಗಳಲ್ಲಿ ಜಾಗ ಸಿಕ್ಕುವುದೆಂದು ನೇರವಾಗಿ ಹೇಳುವ ಧೈರ್ಯ ಅವರಿಗಿಲ್ಲ. ಏಕೆಂದರೆ ಸತ್ಯಾಂಶಗಳು ಈ ಸುಳ್ಳನ್ನು ಗಟ್ಟಿಯಾಗಿ ಖಂಡಿಸುತ್ತವೆ. ಅವರು ನಿಜವಾಗಿಯೂ ಹೇಳುವುದು ಏನೆಂದರೆ, ಕಾರ್ಮಿಕ ವರ್ಗದ ಇತರೇ ವಿಭಾಗಗಳಿಗೆ, ಅಂದರೆ ಈಗ ಕೆಲಸಗಾರರನ್ನು ವಜಾ ಮಾಡುತ್ತಿರುವ ಕೈಗಾರಿಕೆಯ ಶಾಖೆಯನ್ನು ಪ್ರವೇಶಿಸಲು ಆಗಲೇ ಸಿದ್ಧವಾಗಿ ನಿಂತಿದ್ದ ಮುಂದಿನ ಪೀಳಿಗೆಯ ತರುಣ ಕೆಲಸಗಾರರ ವಿಭಾಗಕ್ಕೆ ಉದ್ಯೋಗದ ಹೊಸ ಅವಕಾಶಗಳು ದೊರೆಯುತ್ತವೆ ಎಂದು ಮಾತ್ರ. ಉದ್ಯೋಗ ಕಳೆದುಕೊಂಡ ಕೆಲಸಗಾರರಿಗೆ ಇದರಿಂದ ಭಾರೀ ಸಮಾಧಾನವಾಗುತ್ತದಲ್ಲವೆ? ಶೋಷಿಸಬಹುದಾದಂತಹ ಹೊಸ ರಕ್ತ ಮಾಂಸದ ಕೊರತೆ ಬಂಡವಾಳಗಾರ ಮಹನೀಯರಿಗೆ ಎಂದೂ ಇರುವುದಿಲ್ಲ; ಸತ್ತವರು ತಮ್ಮ ಶವಗಳನ್ನು ತಾವೇ ಸಮಾಧಿ ಮಾಡುವುದಕ್ಕೆ ಬಂಡವಾಳಗಾರರು ಅಡ್ಡ ಬರುವುದಿಲ್ಲ. ಈ ಒಂದು ಸಮಾಧಾನವನ್ನು ಬಂಡವಾಳಗಾರರು ತಮ್ಮೊಳಗೇ ಇಟ್ಟುಕೊಳ್ಳುತ್ತಾರೇ ವಿನಾ

ಕೆಲಸಗಾರರಿಗೆ ಕೊಡುವುದಿಲ್ಲ. ಯಂತ್ರೋಪಕಣದಿಂದಾಗಿ ಇಡೀ ಕಾರ್ಮಿಕ ವರ್ಗವೇ ವಜಾ ಆಗಿಹೋದರೆ, ಆಗ ಬಂಡವಾಳಕ್ಕೆ ಎಂತಹ ಭಯಂಕರ ಪರಿಸ್ಥಿತಿ ಉಂಟಾಗುವುದು! ಕೂಲಿಕೆಲಸವಿಲ್ಲದಿದ್ದರೆ, ಬಂಡವಾಳವು ಹೇಗೆ ತಾನೇ ಬಂಡ ವಾಳವಾಗಿ ಉಳಿದೀತು?

ಅದು ಹಾಗಿರಲಿ, ಯಂತ್ರೋಪಕರಣದಿಂದ ನೇರವಾಗಿ ಉದ್ಯೋಗ ಕಳೆದು ಕೊಂಡವರೂ ಮತ್ತು ಕೆಲಸಕ್ಕಾಗಿ ಕಾಯುತ್ತಿದ್ದ ಹೊಸ ಪೀಳಿಗೆಯ ಇಡೀ ವಿಭಾಗವೂ, ಹೊಸ ಉದ್ಯೋಗವನ್ನು ಪಡೆಯುತ್ತಾರೆಂದು ಭಾವಿಸೋಣ. ಕಳೆದು ಕೊಂಡ ಕೆಲಸದಲ್ಲಿ ಸಿಕ್ಕುತ್ತಿದ್ದಷ್ಟು ಕೂಲಿ ಈ ಹೊಸ ಕೆಲಸದಲ್ಲಿ ಸಿಕ್ಕುವುದೆಂದು ಭಾವಿಸಬಹುದೇ? ಹಾಗೇನಾದರೂ ಆದ ಪಕ್ಷದಲ್ಲಿ ಅದು ಅರ್ಥಶಾಸ್ತ್ರದ ಎಲ್ಲಾ ನಿಯಮಗಳಿಗೂ ವ್ಯತಿರಿಕ್ತವಾಗುವುದು. ತೊಡಕಾದ ಮತ್ತು ಉಚ್ಚವಾದ ಉದ್ಯೋಗಕ್ಕೆ ಬದಲಾಗಿ ಸರಳವಾದ ಮತ್ತು ನೀಚವಾದ ಉದ್ಯೋಗವನ್ನು ಹೇಗೆ ಆಧುನಿಕ ಕೈಗಾರಿಕೆಯು ಯಾವಾಗಲೂ ಉಂಟುಮಾಡುತ್ತಿರುತ್ತದೆಂಬುದನ್ನು ನಾವು ನೋಡಿದ್ದೇವೆ.

ಹಾಗಾದರೆ, ಯಂತ್ರೋಪಕರಣದಿಂದಾಗಿ ಕೈಗಾರಿಕೆಯ ಒಂದು ಶಾಖೆ ಯಿಂದ ಹೊರದೂಡಲ್ಪಟ್ಟ ಕೆಲಸಗಾರರ ಸಮೂಹವು ಮತ್ತೊಂದು ಶಾಖೆಯಲ್ಲಿ ಕೆಲಸವನ್ನು ಕಾಣಬೇಕಾದರೆ, ಅದರಲ್ಲಿನ ಕೂಲಿಯು ಮೊದಲಿನ ಶಾಖೆಗಿಂತ ಕಮ್ಮಿ ಇರಬೇಕಲ್ಲವೆ?

ಆದರೆ ಯಂತ್ರೋಪಕರಣಗಳನ್ನು ತಯಾರಿಸುವ ಕೆಲಸಗಾರರಿಗೆ ಮೇಲಿನ ಮಾತುಗಳು ಅನ್ವಯಿಸುವುದಿಲ್ಲವೆಂದು ಹೇಳುತ್ತಾರೆ. ಯಂತ್ರೋಪಕರಣಗಳಿಗೆ ಗಿರಾಕಿ ಹೆಚ್ಚಿದ ಕೂಡಲೇ ಮತ್ತು ಕೈಗಾರಿಕೆಗಳಲ್ಲಿ ಅವುಗಳನ್ನು ಉಪಯೋಗಿಸಿದ ಕೂಡಲೇ, ಯಂತ್ರಗಳು ಅವಶ್ಯಕವಾಗಿ ಹೆಚ್ಚಾಗಬೇಕೆಂದೂ, ಪರಿಣಾಮವಾಗಿ ಯಂತ್ರಗಳ ತಯಾರಿಕೆಯೂ ಮತ್ತು ಯಂತ್ರಗಳ ತಯಾರಿಕೆಯ ಕೈಗಾರಿಕೆಯಲ್ಲಿ ಕೆಲಸ ಮಾಡುವ ಕೆಲಸಗಾರರ ಸಂಖ್ಯೆಯೂ ಹೆಚ್ಚಾಗಬೇಕೆಂದೂ ಹೇಳುತ್ತಾರೆ. ಅಲ್ಲದೆ ಕೈಗಾರಿಕೆಯ ಈ ಶಾಖೆಯಲ್ಲಿ ಕೆಲಸ ಮಾಡುವ ಕೆಲಸಗಾರರು ಕುಶಲ ಕೆಲಸ ಗಾರರೆಂದೂ, ವಿದ್ಯಾವಂತ ಕೆಲಸಗಾರರೆಂದೂ ಕೂಡ ಹೇಳುತ್ತಾರೆ.

1840ಕ್ಕೆ ಮುಂಚೆ, ಅರ್ಧ-ನಿಜಮಾತ್ರವಾಗಿದ್ದ ಈ ಹೇಳಿಕೆಗಳು, ವರ್ಷದಿಂದೀಚೆಗೆ ಸತ್ಯದ ಛಾಯೆಯನ್ನು ಕೂಡ ಕಳೆದುಕೊಂಡಿವೆ. ಏಕೆಂದರೆ ಹತ್ತಿ-ನೂಲನ್ನು ತಯಾರಿಸುವ ಕೈಗಾರಿಕೆಯಲ್ಲಿ ಉಪಯೋಗಿಸಲ್ಪಡುವ ಯಂತ್ರ ಗಳಂತಹ, ವಿವಿಧ ಕಾರ್ಯಗಳನ್ನು ಮಾಡುವ ಸಾಮರ್ಥ್ಯವನ್ನು ಪಡೆದಿರು ಯಂತ್ರಗಳನ್ನು ಯಂತ್ರೋಪಕರಣಗಳ ತಯಾರಿಕೆಯಲ್ಲಿ ಉಪಯೋಗಿಸಲಾಗ ತ್ತಿದೆ. ಯಂತ್ರೋಪಕರಣಗಳ ಕಾರ್ಖಾನೆಗಳಲ್ಲಿ ಮೊದಲಿನಿಂದ ಕೊನೆಯವರೆಗ ಎಲ್ಲ ಕಾರ್ಯಗಳನ್ನೂ ಮಾಡುವಂತಹ ಈ ಯಂತ್ರೋಪಕರಣಗಳೊಂದಿಗೆ ಕೆಲ ಮಾಡುವ ಕೆಲಸಗಾರರು ಏನೇನೂ ವೈವಿಧ್ಯತೆಯಿಲ್ಲದ ಯಂತ್ರಗಳಂತೆ ಕೆಲ ಮಾಡಬೇಕಾಗುವುದು ಅಷ್ಟೆ.

ಆದರೆ ಯಂತ್ರದ ಉಪಯೋಗದಿಂದ ವಜಾ ಮಾಡಲ್ಪಟ್ಟ ಒಬ್ಬ ಗಂಡಸಿ ಜಾಗದಲ್ಲಿ, ಕಾರ್ಖಾನೆಯು ಪ್ರಾಯಶಃ ಮೂರು ಮಕ್ಕಳನ್ನೂ ಮತ್ತು ಒಬ ಹೆಂಗಸನ್ನೂ ಕೆಲಸಕ್ಕೆ ತೆಗೆದುಕೊಳ್ಳುತ್ತದೆ! ಒಬ್ಬ ಗಂಡಸು ಸಂಪಾದಿಸುತ್ತಿ ಕೂಲಿ ಅವನ ಹೆಂಡತಿಗೂ ಮತ್ತು ಮೂರು ಮಕ್ಕಳಿಗೂ ಸಾಕಾಗುತ್ತಿರಲಿಲ್ಲವೇ ಕೆಲಸಗಾರನ ಕುಟುಂಬ ಪೋಷಣೆಗೂ, ವಂಶೋದ್ಧಾರಕ್ಕೂ ಅವನಿಗೆ ದೊರೆಯು ತ್ತಿದ್ದ ಕನಿಷ್ಠ ಕೂಲಿಯು ಸಾಕಾಗುತ್ತಿರಲಿಲ್ಲವೆ? ಹಾಗಾದರೆ ಬೂರ್ಜವಾಗಳ (ಬಂಡವಾಳಗಾರರಿಗೆ) ಪ್ರಿಯವಾದ ಈ ಮಾತು ಏನನ್ನು ತೋರಿಸುತ್ತದೆ? ಒಬ ಕೆಲಸಗಾರನ ಸಂಸಾರದ ಪೋಷಣೆಗೆ ಒಂದೆ ಕೆಲಸಗಾರನೊಬ್ಬನೇ ದುಡಿಯು ತ್ತಿದ್ದರೆ, ಈಗ ಅದಕ್ಕಾಗಿ ನಾಲ್ಕು ಕೆಲಸಗಾರರ ಜೀವಗಳು ದುಡಿಯಬೇಕೆಂಬುದೆ ಇದರ ಒಳಗುಟ್ಟು.

ನಾವು ಹೇಳಿರುವುದರ ಸಾರಾಂಶ ಏನೆಂದರೆ: ಉತ್ಪತ್ತಿದಾಯಕ ಬಂ ವಾಳವು ಬೆಳೆದಷ್ಟೂ, ಕೆಲಸದ ವಿಭಾಗವೂ ಯಂತ್ರೋಪಕರಣದ ಉಪಯೋಗವ ವಿಸ್ತಾರಗೊಳ್ಳುವುವು. ಕೆಲಸದ ವಿಭಾಗವೂ ಯಂತ್ರೋಪಕರಣದ ಉಪಯೋಗವ ವಿಸ್ತರಿಸಿದಷ್ಟೂ, ಕೆಲಸಗಾರರ ನಡುವೆ ಸ್ಪೈಪೋಟಿ ಹೆಚ್ಚುವುದು ಮತ್ತು ಅವ ಕೂಲಿಯು ಕಮ್ಮಿಯಾಗುವುದು.

ಜೊತೆಗೆ, ಸಮಾಜದ ಉನ್ನತ ಶ್ರೇಣಿಗಳಲ್ಲಿರುವ ಜನರು ಕೂಡ (ದಾರಿದ್ರ ದಿಂದ) ಕಾರ್ಮಿಕ ವರ್ಗಕ್ಕೆ ಸೇರಿ ಅದರ ಸಂಖ್ಯೆಯನ್ನು ಹೆಚ್ಚಿಸುತ್ತಾರೆ; ಸಣ್ಣ

ಕೈಗಾರಿಕೋದ್ಯಮಿಗಳೂ ಮತ್ತು ಅಲ್ಪ ಬಡ್ಡಿ ಬಾಡಿಗೆಗಳಿಂದ ಜೀವನ ನಡೆಸುವವರೂ ಒಂದಷ್ಟು ಮಂದಿ ಕಾರ್ಮಿಕ ಸಮುದಾಯದ ಮಧ್ಯೆ ಎಸೆಯಲ್ಪಡುತ್ತಾರೆ. ಕೆಲಸಗಾರರೊಂದಿಗೆ ಅವರೂ ಕೂಡ ಜರೂರಾಗಿ ಕೈ ಚಾಚದಿದ್ದರೆ, ಅವರಿಗೆ ಬೇರೆ ಗತಿಯೇ ಇಲ್ಲ. ಕೆಲಸವನ್ನು ಕೇಳಲು ಎತ್ತಿರುವ ಕೈಗಳ ಅರಣ್ಯವು ಈ ರೀತಿ ದಿನೇ ದಿನೇ ದಟ್ಟವಾಗುತ್ತಲೇ ಇರುವುದು; ಆದರೆ ಕೈಗಳು ಮಾತ್ರ ದಿನೇ ದಿನೇ ಸಣ್ಣದಾಗುವುವು.

ಹೆಚ್ಚು ಹೆಚ್ಚು ಭಾರೀ ಪ್ರಮಾಣದಲ್ಲಿ ಉತ್ಪತ್ತಿ ಮಾಡುವುದನ್ನೇ ತನ್ನ ಪ್ರಥಮ ನಿಯಮಗಳಲ್ಲಿ ಒಂದನ್ನಾಗಿಟ್ಟುಕೊಂಡಿರುವ ಸ್ಪರ್ಧೆಯಲ್ಲಿ, ಅಂದರೆ ದೊಡ್ಡ ಕೈಗಾರಿಕೋದ್ಯಮಿಯಾಗಿರಬೇಕು, ಸಣ್ಣ ಕೈಗಾರಿಕೋದ್ಯಮಿಯಾಗಿರಬಾರದು ಎಂಬ ನಿಯಮವನ್ನುಳ್ಳ ಸ್ಪರ್ಧೆಯಲ್ಲಿ, ಸಣ್ಣ ಕೈಗಾರಿಕೋದ್ಯಮಿಯು ಉಳಿಯಲಾರನೆಂಬುವುದು ಸ್ವತಸಿದ್ಧವಾಗಿದೆ.

ಬಂಡವಾಳವು ಯಾವ ಪ್ರಮಾಣದಲ್ಲಿ ಬೆಳೆಯುವುದೋ, ಬಂಡವಾಳಗಳು ಗಾತ್ರದಲ್ಲೂ ಮತ್ತು ಸಂಖ್ಯೆಯಲ್ಲೂ ಎಷ್ಟರಮಟ್ಟಿಗೆ ಅಧಿಕವಾಗುತ್ತವೋ ಅಷ್ಟರಮಟ್ಟಿಗೆ ಬಂಡವಾಳ ಹಣಕ್ಕೆ ದೊರೆಯುವ ಬಡ್ಡಿ ಕೂಡ ಕಮ್ಮಿಯಾಗುವುದೆಂಬುದನ್ನು; ಆದುದರಿಂದ ಸಣ್ಣ ಬಡ್ಡಿಜೀವಿಯು (ಬಡ್ಡಿಯಿಂದಲೇ ಜೀವಿಸುವವನು) ತನಗೆ ಬರುವ ಬಡ್ಡಿಯಿಂದ ಜೀವಿಸುವುದಕ್ಕಾಗದೆ, ಕೈಗಾರಿಕೆಗೆ ಇಳಿಯಬೇಕಾಗುವುದೆಂಬುದನ್ನೂ; ಮತ್ತು ಇದರ ಪರಿಣಾಮವಾಗಿ ಸಣ್ಣ ಕೈಗಾರಿಕೋದ್ಯಮಿಗಳ, ಆದುದರಿಂದ ಶ್ರಮಜೀವಿ ವರ್ಗದ ಭಾವೀ ಸದಸ್ಯರ, ಸಂಖ್ಯೆ ಹೆಚ್ಚಲು ಸಹಾಯಕವಾಗುವುದೆಂಬುದನ್ನೂ—ಇವೆಲ್ಲವನ್ನೂ ತಿಳಿದುಕೊಳ್ಳಲು ಮತ್ತಷ್ಟು ವಿವರಣೆಯೇನೂ ಬೇಕಾಗಿಲ್ಲ.

ಕೊನೆಯದಾಗಿ, ಮೇಲೆ ವಿವರಿಸಲಾಗಿರುವ ಚಲನೆಯಿಂದಾಗಿ, ಬಂಡವಾಳಗಾರರು ವಿಧಿಯಿಲ್ಲದೆ ಈಗಾಗಲೇ ಇರುವ ಪ್ರಚಂಡ ಉತ್ಪತ್ತಿ ಸಾಧನಗಳನ್ನು ಇನ್ನೂ ಅಧಿಕ ಪ್ರಮಾಣದಲ್ಲಿ ಶೋಷಿಸಿದಷ್ಟೂ, ಮತ್ತು ಇದಕ್ಕಾಗಿ ತಾವು ಪಡೆದಿರುವ ಸಾಲ ಸೌಲಭ್ಯಗಳೆಲ್ಲವನ್ನೂ ಉಪಯೋಗಿಸಿಕೊಂಡಷ್ಟೂ, ಅದೇ ಪ್ರಮಾಣದಲ್ಲಿ ಕೈಗಾರಿಕೆಯ ಭೂಕಂಪಗಳು, ಅಂದರೆ ಬಿಕ್ಕಟ್ಟುಗಳು ಹೆಚ್ಚುವುವು. ಅಂತಹ ಭೂಕಂಪಗಳಿಂದ ವ್ಯಾಪಾರ ಪ್ರಪಂಚವು ಬದುಕಿ ಹೊರಬರಬೇಕಾದರೆ, ತನ್ನ ಐಶ್ವರ್ಯದ,

ಉತ್ಪನ್ನಗಳ ಒಂದು ಭಾಗವನ್ನು ಮತ್ತು ಉತ್ಪಾದಕ ಶಕ್ತಿಗಳ ಒಂದು ಭಾ
ಕೂಡ, ಪಾತಾಳ ಪ್ರಪಂಚದ ದೇವತೆಗಳಿಗೆ ಅರ್ಪಿಸಬೇಕಾಗುವುದು. ೯
ಟ್ಟುಗಳು ಹೆಚ್ಚುಹೆಚ್ಚಾಗಿ ಮತ್ತು ಹೆಚ್ಚು ರಭಸದಿಂದ ಪದೇಪದೇ ಉಂಟಾ
ಮತ್ತಾವ ಕಾರಣವಿಲ್ಲದಿದ್ದರೂ, ಈ ಕೆಳಕಂಡ ಕಾರಣ ಒಂದರಿಂದಲೇ
ಉಂಟಾಗುವುದು: ಉತ್ಪತ್ತಿಯ ಮೊತ್ತವೂ, ಆದುದರಿಂದ ಹೆಚ್ಚಿನ
ಕ್ಷೇತ್ರದ ಅಗತ್ಯವೂ, ಹೆಚ್ಚಿದಂತೆಲ್ಲಾ, ಹಿಂದಿನ ಒಂದೊಂದು ಬಿಕ್ಕಟ್ಟೂ
ಸ್ವಾಧೀನವಾಗದಿರುವ ಮಾರಾಟದ ಕ್ಷೇತ್ರವನ್ನೂ ಅಥವಾ ಸ್ವಲ್ಪಮಟ್ಟಿಗೆ
ಶೋಷಿತವಾಗಿರುವ ಮಾರಾಟದ ಕ್ಷೇತ್ರವನ್ನೂ ವಿಶ್ವವ್ಯಾಪಾರದ ಹಿಡಿತಕ್ಕೆ
ವಶಪಡಿಸಿರುವುದರಿಂದ, ಪ್ರಪಂಚದ ಮಾರುಕಟ್ಟೆಯು (ವ್ಯಾಪಾರ ಕ್ಷೇತ್ರವು)
ಹೆಚ್ಚು ಸಂಕುಚಿತವಾಗುವುದು ಮತ್ತು ವ್ಯಾಪಾರಕ್ಕೆ ಸಿಕ್ಕುವಂತಹ ಹೊಸ ಪ್ರ
ಗಳು ಕಮ್ಮಿಯಾಗುತ್ತಾ ಹೋಗುವುವು. ಬಿಕ್ಕಟ್ಟುಗಳು ಹೆಚ್ಚಿನ ಸಂಖ್ಯೆಯ ಲ
ಮತ್ತು ಹೆಚ್ಚಿನ ರಭಸದಿಂದಲೂ ಪದೇಪದೇ ಉಂಟಾಗುವುದಕ್ಕೆ ಈ ಕಾರಣವೊಂ
ಸಾಕು. ಆದರೆ ಬಂಡವಾಳವು ಕೆಲಸದ ಮೇಲೆ ಜೀವಿಸುವುದು ಮಾತ್ರವ
ಕುಲೀನರಾಗಿದ್ದರೂ ಕಿರಾತಕನೂ ಆಗಿರುವ ಈ ಪ್ರಭುವು—ಬಂಡವಾಳವು—
ಟ್ಟುಗಳಲ್ಲಿ ಅಳಿಯುವ ತನ್ನ ಗುಲಾಮರಾದ ಕೆಲಸಗಾರರ ಶವಗಳನ್ನೂ ಕೂಡ ಬಿ
ವುದಿಲ್ಲ; ಅವುಗಳನ್ನು ತನ್ನ ಸಮಾಧಿಗೆ ಎಳೆದುಕೊಂಡುಹೋಗುವುದು. ಹೀ
ನಮಗೆ ತಿಳಿಯಬರುವುದೇನೆಂದರೆ: ಬಂಡವಾಳವು ವೇಗವಾಗಿ ಬೆಳೆದರೆ, ಕೆಲ
ಗಾರರ ನಡುವೆ ಪೈಪೋಟಿಯು ಹೋಲಿಸಲಾರದಷ್ಟು ವೇಗವಾಗಿ ಬೆಳೆಯುತ್ತದೆ
ಅಂದರೆ ಕಾರ್ಮಿಕ ವರ್ಗದ ಉದ್ಯೋಗ ಅವಕಾಶಗಳೂ, ಬದುಕಿಗೆ ಬೇಕಾದ ಪದಾ
ರ್ಥಗಳೂ ಅಷ್ಟರಮಟ್ಟಿಗೆ ಇನ್ನೂ ಕಮ್ಮಿಯಾಗುವುವು. ಆದರೂ ಕೂಡ ಬಂಡವಾ
ಳದ ವೇಗವಾದ ಬೆಳವಣಿಗೆಗಿಂತ ಹೆಚ್ಚು ಅನುಕೂಲವಾದ ಪರಿಸ್ಥಿತಿ ಕೂಲಿಕೆಲ
ದೊರೆಯುಂತಿಲ್ಲ.

